# ಪರದೆಯ ಹಿಂದೆ

(? . . . . . . . . . !)




ಲೇಖಕರು :

ಟಿ. ವಿ. ಕೆ. ಮೂರ್ತಿ, ಬಿ.ಎ. (ಆನರ್ಸ್)





ಪ್ರಕಾಶಕರು :

ಮೂರ್ತಿ ಏಜನ್ಸೀಸ್

ಕೃಷ್ಣಮೂರ್ತಿಪುರಂ

ಮೈಸೂರು

ಬೆಂಗಳೂರಿನಲ್ಲಿ ಏಜಂಟರು :

**ಆನಂದ್ ಬ್ರದರ್ಸ್**

ಕೆಂಪೇಗೌಡ ರಸ್ತೆ

ಬೆಂಗಳೂರು ಸಿಟಿ.



ಮೊದಲ ಮುದ್ರಣ—೧೯೪೮







**ಬೆಲೆ: ೧—೦—೦**



ಮುದ್ರಕರು :

ಹೆಚ್. ಕೆ. ವೇದವ್ಯಾಸಾಚಾರ್, ಎಂ.ಎ., ಶ್ರೀ ಪರಿಮಳ ಪವರ್ ಪ್ರೆಸ್

ಡಿ. ಸುಬ್ಬಯ್ಯ ರಸ್ತೆ, ಮೈಸೂರು.

---

ನಕ್ಕು ನಗಿಸುವ,
ನಕ್ಕು ನಕ್ಕು ವಿಚಾರ ಮಾಡುವ,
ನಗೆಯ ಬಗೆಯನ್ನು ಬಲ್ಲವರಿಗೆ.

---

# ಪರದೆಯ ಹಿಂದೆ

---

೧

ಅದೊಂದು ಬಹಳ ಸುಧಾರಿಸಿದ ರಾಷ್ಟ್ರ. ದಾಸ್ಯ ಸಂಕೋಲೆಗಳನ್ನು ಕಿತ್ತೊಗೆದು ಸ್ವಾತಂತ್ರ್ಯ ಗಳಿಸಿತ್ತು. ಗಳಿಸಿದ್ದ ಸ್ವಾತಂತ್ರ್ಯವನ್ನು ಉಳಿಸಿಕೊಂಡು ಬಂದಿತ್ತು. ರಾಷ್ಟ್ರದ ಮೂಲೆಮೂಲೆಯಲ್ಲೂ ಸ್ವಾತಂತ್ರ್ಯ ತುಂಬಿ ತುಳುಕುತ್ತಿತ್ತು. ಸ್ವಾತಂತ್ರ್ಯದ ಸವಿಯೂಟವನ್ನು ಎಲ್ಲರೂ ಸವಿಯುವವರೇ. ಅವರದೇ ರಾಜ್ಯ, ಸ್ವರಾಜ್ಯ. ಹಿಂದುಳಿದ ಕೋಮುಗಳ ಸಂಘಗಳು, ಗಿರಣಿ ಕೆಲಸಗಾರರ ಸಂಘಗಳು, ಸನಾತನ ಧರ್ಮ ಬೆಳಗುವ ಸಂಘಗಳು, ಬಂಡವಾಳಗಾರರ ಸಂಘಗಳು, ಸಮತಾವಾದ ಪ್ರಚಾರ ಸಂಘಗಳು, ಇವುಗಳನ್ನು ವಿರೋಧಿಸುವ ಸಂಘ ಸಂಸ್ಥೆಗಳು.... ಇವುಗಳೆಲ್ಲಾ ಛಲದಿಂದ ಬೆಳಕಿನಲ್ಲಿ. ಬಾಗಿಲು ತೆರೆದುಕೊಂಡೇ, ತಮ್ಮ ಕಾರ್ಯ ಚಟುವಟಿಕೆಯನ್ನು ತಮ್ಮ ತಮ್ಮ ಕಾರ್ಯಾಲಯಗಳಲ್ಲಿ ನಾಗಿಸುತ್ತಿದ್ದುವು. "ಎಂತಹ ಸುಧಾರಿಸಿದ ರಾಷ್ಟ್ರ!.... ಕೈಗಾರಿಕೆಗಳು ಎಷ್ಟರ ಮಟ್ಟಿಗೆ ಬೆಳೆದಿವೆ!.... ಜನರು ಎಷ್ಟು ಸುಖವಾಗಿದ್ದಾರೆ!.... ... ಆಹಾ!" ಎನ್ನುತ್ತಿದ್ದರು ಹೊರರಾಷ್ಟ್ರದವರೆಲ್ಲ.

ರಾಷ್ಟ್ರದ ರಾಜಧಾನಿಯಂತೂ ಕಣ್ತುಂಬುವ ಪಟ್ಟಣ. ಎಲ್ಲೆಲ್ಲಿ ನೋಡಿದರೂ ನಾಗರೀಕತೆಯ ಸಿರಿ ಆ ಒಂದು ಪಟ್ಟಣದಲ್ಲಿ ಎಷ್ಟು ವಿದ್ಯಾಸಂಸ್ಥೆಗಳು, ಎಷ್ಟು ಜನ ಕಲಾವಿದರು, ಸಾಹಿತಿಗಳು! ಅನಕ್ಷರತೆಯಂತೂ ಎಳ್ಳಷ್ಟೂ ಇಲ್ಲ. ಇನ್ನು ಜನರ ಜೀವನಮಟ್ಟವನ್ನು ಮಾತಿನಲ್ಲಿ ಹೇಳುವ ಶ್ರಮ ಕೂಡ ಅನವಶ್ಯಕ. ಅಲ್ಲಿದ್ದ ಅಸಂಖ್ಯಾತ ಸುಸಜ್ಜಿತ ಸಿನಿಮಾ ಮಂದಿರಗಳು, ನಾಟಕ ಮಂದಿರಗಳು, ಹೊಟೇಲುಗಳು, ಸಿಮೆಂಟ್ ಕಾಂಕ್ರೀಟ್ ರಸ್ತೆಗಳು, ಕಣ್ಣಿಟ್ಟಲ್ಲಿ ಕಾಣುತ್ತಿದ್ದ ಮನೋರಂಜಕವಾದ ಉದ್ಯಾನವನಗಳು—ಇತ್ಯಾದಿಗಳೇ ಸಾಕು, ಸಾಕಷ್ಟಕ್ಕಿಂತ ಹೆಚ್ಚೆನಿಸುವಂತೆ ಅಲ್ಲಿನ ಜನರ ಜೀವನ ಮಟ್ಟವನ್ನು ಸಾರುತ್ತಿದ್ದುವು.

ಆದರ್ಶ ದಾಂಪತ್ಯ ಜೀವನಕ್ಕೆ ಇದು ಹೆಸರಾದ ರಾಷ್ಟ್ರ. ವಿವಾಹ ವಿಚ್ಛೇದನದ ನಿಯಮಕ್ಕೆ ಇಲ್ಲಿ ಕಾನೂನಿನ ಮೂಲಕ ಒಣ ಒಪ್ಪಿಗೆ ಇತ್ತಿದ್ದು ಮಾತ್ರವಲ್ಲ; ಜನರೆಲ್ಲ ಚಾಚೂ ತಪ್ಪದೆ ಅದನ್ನು ನಿತ್ಯ ಜೀವನದಲ್ಲಿ ಅನುಷ್ಠಾನಕ್ಕೆ ತಂದುಕೊಂಡಿದ್ದರು. ನಾಲ್ಕಾರು ಮಕ್ಕಳಾಗಿರಲಿ, ಮೂರು ವಿಚ್ಛೇದನಗಳು ಆಗಲೇ ಪೂರೈಸಿರಲಿ, ಹೆಂಗಸು ತನಗೆ ಸರಿಹೋಗದಿದ್ದಲ್ಲಿ ಅಥವಾ ಗಂಡಸಿಗೇ ಸರಿಹೋಗದಿದ್ದಲ್ಲಿ ಕೂಡಲೆ ಅವರು ವಿಚ್ಛೇದನಕ್ಕೆ ಅರ್ಜಿ ಹಾಕಿ ಹೊಸ ಹೊಸ ದಾಂಪತ್ಯ ಪ್ರಯೋಗಗಳಲ್ಲಿ ತೊಡಗಿ ಆದರ್ಶ ದಾಂಪತ್ಯದ ಗುರಿಯನ್ನು ಸಾಧಿಸುತ್ತಿದ್ದರು.

ನ್ಯಾಯ ಪಾಲನೆ ಎಂದರೆ ಈ ರಾಷ್ಟ್ರ ಎತ್ತಿದ ಕೈ. ಇಲ್ಲಿನ ಉನ್ನತ ನ್ಯಾಯಾಧಿಕಾರಿಗಳು, ಪ್ರಖ್ಯಾತರಾದ ಅಸಂಖ್ಯಾತ ಲಾಯರುಗಳು— ಇವರುಗಳೆಲ್ಲ ನ್ಯಾಯಶಾಸ್ತ್ರದಲ್ಲಿ ಅಸಾಧ್ಯವಾಗಿ ನುರಿತ ಪ್ರಚಂಡ ವಿದ್ವಾಂಸರು. ಇವರುಗಳು ಬರೆದ ಪುಸ್ತಕಗಳನ್ನೆ ಮುಂದುವರಿದಿದ್ದ ಉಳಿದೆಲ್ಲ ರಾಷ್ಟ್ರಗಳೂ ತಮ್ಮ ತಮ್ಮ ಭಾಷೆಗಳಿಗೆ ತರ್ಜುಮೆ ಮಾಡಿಕೊಂಡು ವಿಶ್ವವಿದ್ಯಾನಿಲಯದಲ್ಲಿ ಮುಖ್ಯ ಪಠ್ಯ ಪುಸ್ತಕಗಳನ್ನಾಗಿ ಬಳಸುತ್ತಿದ್ದವು.

ರಾಷ್ಟ್ರದ ಪ್ರಧಾನ, ಕೇಂದ್ರ ನ್ಯಾಯಾಸ್ಥಾನ ರಾಜಧಾನಿಯಲ್ಲಿ. ಲೋಕಪ್ರಸಿದ್ಧವಾದ—ಏಕೆ, ದೇವಲೋಕಕ್ಕೂ ಈ ನ್ಯಾಯಸ್ಥಾನಕ್ಕೂ ಹಿರಿಯ ಸಂಬಂಧವಿದೆ ಎಂದು ಹಿಂದುಳಿದ ಹಲವು ರಾಷ್ಟ್ರಗಳ ಅಭಿಪ್ರಾಯ— ಈ ನ್ಯಾಯಾಸ್ಥಾನದಲ್ಲಿ ಚಿತ್ರವಿಚಿತ್ರವಾದ ಅನೇಕ 'ಕೇಸು' ಗಳು ನಡೆದು ಪ್ರಪಂಚಕ್ಕೇ ಇದು ಒಂದು ಮಾದರಿಯಾಗಿತ್ತು. ಹಾಗೆ ಒಂದೊಂದು ಕೇಸನ್ನು ನಡೆಸುವುದರಲ್ಲೂ ನ್ಯಾಯಾಧೀಶರು, ಲಾಯರುಗಳು ಮತ್ತು ಸಂಬಂಧಿಸಿದ ಇತರ ನ್ಯಾಯಶಾಸ್ತ್ರಜ್ಞರು ತೋರಿದ ವಿವೇಚನೆ, ಪ್ರತಿಭೆ, ಹಾಗೂ ಚಮತ್ಕಾರಗಳನ್ನು ಪುಸ್ತಕ ರೂಪವಾಗಿ ಪ್ರಕಟಿಸುವುದರಿಂದಲೇ ಅನೇಕ ರಾಷ್ಟ್ರಗಳಲ್ಲಿ ಅನೇಕ ಪ್ರಕಾಶಕರು ವಾಣಿಜ್ಯ ಕ್ಷೇತ್ರದಲ್ಲಿ ಅಗ್ರ ಹಾಗೂ ಉಗ್ರ ಸ್ಥಾನವನ್ನು

ಗಳಿಸಿಕೊಂಡಿದ್ದರು.

ರಾಜಧಾನಿಯ ಎಲ್ಲ ಮುಖ್ಯ ರಸ್ತೆಗಳೂ ನ್ಯಾಯಾಸ್ಥಾನದಲ್ಲಿ ಕೊನೆಗಾಣುತ್ತಿದ್ದುವು. ಸಹಸ್ರಾರು ಜನ ಕುಳಿತರೂ ಖಾಲಿ ಜಾಗ ಕಾಣಬಹುದಾಗಿದ್ದ ನ್ಯಾಯಾಸ್ಥಾನ ರಾಷ್ಟ್ರಕ್ಕೆ ಸಲ್ಲುವ ಕೀರ್ತಿಯನ್ನು ತರುವುದಾಗಿತ್ತು. "ಮುದುಕರು-ಮಕ್ಕಳು, ಹೆಂಗಸರು-ಗಂಡಸರು, ಪಂಡಿತರು-ಪಾಮರರು, ಬಡವರು-ಭಾಗ್ಯವಂತರು ಎನ್ನುವ ಭೇದ ಭಾವ ಲೇಸೂ ಇಲ್ಲದೆ ಸಕಲರಿಗೂ ದೇವರೊಪ್ಪುವಂತಹ ನ್ಯಾಯ ದೊರಕಿಸಿ ಕೊಡುವುದೇ ಈ ಸ್ವತಂತ್ರ ನ್ಯಾಯಾಸ್ಥಾನದ ಹೆಗ್ಗುರಿ. ರಾಜಧಾನಿಯ ಎಲ್ಲ ಪ್ರಮುಖ ರಸ್ತೆಗಳೂ ಈ ನ್ಯಾಯ ನಿಕೇತನವನ್ನು ಸೇರುವ ಅಭಿಪ್ರಾಯವಾದರೂ ಅಷ್ಟೆ. ಅನ್ಯಾಯ ಎಂತಹುದೇ ಆಗಲಿ, ಆಗಿರಲಿ, ಅದನ್ನು ಇಲ್ಲಿ ಬರುವಂತೆ ಮಾಡಿ ಅದಕ್ಕೆ ತಕ್ಕುದಾದ ಶಿಕ್ಷೆಯನ್ನು ವಿಧಿಸಿ ನ್ಯಾಯಜ್ಯೋತಿಯನ್ನು ಚಿರಕಾಲ ಬೆಳಗುತ್ತೇವೆಂಬುದೇ ಅಭಿಪ್ರಾಯ....(ಚಪ್ಪಾಳೆ)....ನಾಡಿನ ಹೆಬ್ಬಯಕೆ....ನ್ಯಾಯ ಚಿರಾಯುವಾಗಲಿ, ನ್ಯಾಯ ಚಿರಾಯುವಾಗಲಿ (ಎಲ್ಲರೂ ಹಾಗೆಯೇ ಕೂಗುವರು)" ಹೀಗೆಂದು ನ್ಯಾಯಶಾಸ್ತ್ರದಲ್ಲಿ ಘನ ವಿದ್ವಾಂಸರೆಂದು ಹೆಸರಿದ್ದ ನಾಡಿನ ಹಿರಿಯರೊಬ್ಬರು ನ್ಯಾಯಾಸ್ಥಾನದ ಆರಂಭೋತ್ಸವದ ಮಹಾಸಮಾರಂಭದಲ್ಲಿ ಭಾಷಣ ಮಾಡುತ್ತಾ ನುಡಿದಿದ್ದರು. ಅಂದಿನಿಂದ ಯಾವೊಂದು ಪ್ರಚಾರ ಕಾರ್ಯಕ್ಕೇ ಆಗಲಿ 'ನ್ಯಾಯ ಚಿರಾಯುವಾಗಲಿ' ಎಂಬ ಮಾತು ಉಪಕ್ರಮೋಪಸಂಹಾರ, ಅಗತ್ಯಬಿದ್ದರೆ ಏತನ್ಮಧ್ಯೆ, ಘೋಷಣೆಯಾಗಿ ರೂಢಿಗೆ ಬಂತು.

೨

**ಅಂದು ನ್ಯಾಯಾಸ್ಥಾನದಲ್ಲಿ ಎಲ್ಲಿಲ್ಲದ ಗಲಾಟೆ.** ಒಂದು ವಾರದಿಂದ ಮಕ್ಕಳನ್ನು ಕದ್ದುಕೊಂಡುಹೋಗಿ ಕೊಲ್ಲುವ ಸುಪ್ರಸಿದ್ಧ ವಿದೇಶಿ ಜನಾಂಗದ ತಂಡವೊಂದು ರಾಜಧಾನಿಗೆ ಬಂದು ಹಾವಳಿ ಮಾಡುತ್ತಿದೆಯೆಂದೂ, ಈಗಾಗಲೆ ಕೆಲವು ಮಕ್ಕಳು ಕಳುವಾಗಿವೆಯೆಂದೂ ಸುದ್ದಿ ೧ ಬ್ಬರಿಂದ ಮತ್ತೊಬ್ಬರಿಗೆ, ಮತ್ತೊಬ್ಬರಿಂದ ಮಗದೊಬ್ಬರಿಗೆ ಹಬ್ಬಿ

ಜನರಲ್ಲಿ ಹಾಹಾಕಾರ ಮತ್ತು ಕಳವಳ ಎದ್ದಿತ್ತು. ವೃತ್ತಪತ್ರಿಕೆಗಳಲ್ಲೂ, ರೇಡಿಯೋ ಮೂಲಕವೂ ಮತ್ತು ಹಸ್ತಪ್ರತಿಗಳ ಮೂಲಕವೂ ಹೊರ ಬಿದ್ದ ಸರ್ಕಾರಿ ಪ್ರಕಟಣೆಗಳು ಕಳವಳಪಡಬೇಕಾದ ಪ್ರಸಂಗವಿಲ್ಲ ವೆಂದೂ, ಈಗಾಗಲೆ ಕೆಲವು ಮಕ್ಕಳು ಕಳುವಾದುವೆಂಬ ಸುದ್ದಿ ನಿರಾ ಧಾರವೆಂದೂ, ಜನರು ಯಾರೂ ಅಂಥ ಬುಡವಿಲ್ಲದ ಸುದ್ದಿಯನ್ನು ಹರಡಿ ಇಲ್ಲದ ಸಲ್ಲದ ಹಾಹಾಕಾರವನ್ನು ಉಂಟುಮಾಡಬಾರದೆಂದೂ, ಹಾಗೆ ಹರಡಿದರೆ ಶಿಕ್ಷೆಗೆ ಗುರಿಯಾಗಬೇಕಾಗುವುದೆಂದೂ, ಪೋಲೀಸ್ ಶಾಖೆ ಚಟುವಟಿಕೆಯಿಂದ ಕೆಲಸ ಮಾಡುತ್ತಿದೆಯೆಂದೂ, ಅತಿ ಶೀಘ್ರದಲ್ಲೇ ನಿಜಾಂಶದ ಪತ್ತೆ ಆಗೇ ಆಗುವುದೆಂದೂ ಸಾರುತ್ತಿದ್ದುವು. ಘನ ಸರ್ಕಾರ ಬರೇ ಸಾರಿದ್ದು ಮಾತ್ರವಲ್ಲ. ಕೇವಲ ಎರಡೇ ದಿನಗಳಲ್ಲಿ ಪೋಲೀಸು ಅಧಿಕಾರಿಗಳೋರ್ವರು ಪೇಟೆಯ ಮಧ್ಯದಲ್ಲಿ ತಮ್ಮ ಇರುವಿಕೆಯನ್ನೆಲ್ಲಾ ತೂಕಡಿಕೆಗೆ ಬಲಿಕೊಟ್ಟು ನಿಂತಿದ್ದಾಗ ಪಕ್ಕದ ದೊಡ್ಡ ರಸ್ತೆಯಲ್ಲಿ ಗುಂಪೊಂದು ಸೇರಿ ಅಸಾಧ್ಯವಾಗಿ ಗಲಾಟೆ ಎಬ್ಬಿಸಿದುದರ ಸಲುವಾಗಿ ವ್ಯೆಯ ಜೊತೆಗೆ ಸೇರಿ ವ್ಯೆಮರೆತಿದ್ದ ಅವರ ಮನಸ್ಸು ಎಚ್ಚೆತ್ತು ಸುದ್ದಿ ಯನ್ನು ತಿಳಿಯುವ ಆತುರದಿಂದ ಅವರು ಕಣ್ಬಿಟ್ಟು ಕಾಲಿಗೆ ಬುದ್ಧಿ ಹೇಳಿದರು. ಗಲಾಟೆಯಾಗುತ್ತಿದ್ದ ಗುಂಪಿನ ಹತ್ತಿರ ಅಧಿಕಾರಿಗಳು ಬಂದೊಡನೆಯೇ ಜನರೆಲ್ಲ ಗಲಾಟೆಯನ್ನು ನಿಲ್ಲಿಸಿ ಸಲ್ಲುವ ಮರ್ಯಾದೆ ಯಿಂದ ಅವರನ್ನು ಬರಮಾಡಿಕೊಂಡರು.

"ಈಗತಾನೇ ಫೋನ್ ಮಾಡೋಣವೆಂದುಕೊಂಡಿದ್ದೆ. ಹ್ಹಹ.... ಅಷ್ಟರಲ್ಲೇ.... ತಾವು ದಯಮಾಡಿಸಿದ್ದು.... ಹಾ...." ಎಂದು ಹೇಳಿ ಉಳಿದ ಮಾತನ್ನು ಮುಖಭಾವದಿಂದಲೇ ಉತ್ಸಾಹಿಯಂತೆ ಕಾಣುತ್ತಿದ್ದ ಚೂಟಿ ಯಾಗಿದ್ದ ವಿದ್ಯಾರ್ಥಿಯೊಬ್ಬ ಅತಿವಿನಯದಿಂದ ಮುಂದೆ ಬಂದು ಅಧಿಕಾರಿಗಳಿಗೆ ವ್ಯಕ್ತಪಡಿಸಿದ. ದಿನಬೆಳಗಾದರೆ ಈ ವಿದ್ಯಾರ್ಥಿಯನ್ನು ಮನೆಯಲ್ಲಿ "ಮನೆಗೆ ಮಾರಿ, ಪರರಿಗೆ ಉಪಕಾರಿ" ಎಂದು ಹಿಡಿದು ಹಿಡಿದು ದಂಡಿಸುತ್ತಿದ್ದರು. ಕ್ರಾಂತಿಪಕ್ಷದ ವೀರ ನಾಯಕನ ಚೇಲರ ಮುಖಂಡ ತನ್ನ ಚೇಲ ಪರಿವಾರ ಸಮೇತನಾಗಿ ಹಾಜರಿದ್ದ. ಆ ಉತ್ಸಾಹಿ

ವಿದ್ಯಾರ್ಥಿ ಮುಂದುವರಿದು ಅಧಿಕಾರಿಗಳನ್ನು ಎ ದು ಗೋ ೯ ಂ ಡು ಮಾತನ್ನು ಉಪಕ್ರಮಿಸಿದ್ದು ಚೇಲರಿಗೆ ಹಿತವೆನಿಸಲಿಲ್ಲ. ಇದರಿಂದ ಆ ವಿದ್ಯಾರ್ಥಿ ತಮ್ಮ ಮುಖಂಡನಿಗೆ ಅಪಮಾನ ಮಾಡಿದನೆಂದೂ ಅವರಿಗೆ ಅನಿಸಿತು. ಚೇಲರ ಸಂಖ್ಯೆಯಾದರೂ ಕಡಿಮೆ ಇರಲಿಲ್ಲ—ನೂರಾರು ಜನರಿದ್ದರು. ಅವರವರಲ್ಲೆ ಪಿಸಪಿಸ ಎಂದು ಮಾತು ಶುರು ಆಗಿ ಗುಸ ಗುಸ ಎಂದು ಬೆಳೆದು ಕಡೆಗೆ ಸ್ವಲ್ಪ ಗಲಾಟೆಗೇ ಇಟ್ಟುಕೊಂಡಿತು. ಅಧಿಕಾರಿಗಳ ಹತ್ತಿರ ಮಾತು ಬೆಳೆಸಲು ಕಾತುರನಾಗಿ ನಿಂತಿದ್ದ ಸದಾ ಉತ್ಸಾಹಿ ವಿದ್ಯಾರ್ಥಿ ಗಲಾಟೆಯನ್ನು ಕೇಳುತ್ತಲೆ ಉತ್ಸಾಹ ಪ್ರೇರಿತ ನಾಗಿ ವಿಷಯವೇನೆಂಬುದನ್ನು ವಿಚಾರಿಸಲು ಚೇಲರ ಗುಂಪಿನೊಳಗೆ ಬಂದ. ತಕ್ಷಣವೆ ಮುಂದಿದ್ದ ಚೇಲರು ಅವನನ್ನು ಗೌರವವಾಗಿ ಹಿಂದಕ್ಕೆ ಸರಬರಾಯಿ ಮಾಡಿದರು. ಹಿಂದಿದ್ದ ಚೇಲರು ಸದ್ದಿಲ್ಲದೆ ಅವನನ್ನು ಹಿಡಿದು “ನಡ್ಯಯ್ಯಾ .. ದೊಡ್ಮನುಷ್ಯಾ... ಅಧಿಕಾರಿಗಳ ಹತ್ರ ನಾಲ್ಗೇ ಆಡಸ್ತಾ ನಿಂತ್ಕೊಂಡ....ಊಟಾಮಾಡ್ಹೋಗು ಮನೇಗ್ಹೋಗಿ” ಎಂದಿದ್ದೂ ನೂ ಕೈಯಿಂದ ಕೈಗೆ ಪುಟಪುಟನೆ ಪುಟ ಹಾಕಿ ಕಡೆಗೆ ಗುಂಪಿನಾಚೆ ರವಾನಿಸಿಯೇ ಬಿಟ್ಟರು. ಏತನ್ಮಧ್ಯೆ ಮುಂದಿದ್ದ ಚೇಲರು ಮುಖಂಡನನ್ನು ಭಯಭಕ್ತಿ ಮಿಶ್ರವಾದ ಗೌರವದಿಂದ ಅಧಿಕಾರಿಗಳೆಡೆಗೆ ಬೀಳ್ಕೊಟ್ಟರು.

ಜನರ ಗುಂಪಿನ ಹತ್ತಿರವೆ, ಅದಕ್ಕೆ ಹೊಂದುಕೊಂಡಂತೆಯೇ, ಏಳೆಂಟು ಜನ ಎಳೆಯ ವಯಸ್ಸಿನವರ ಗುಂಪೊಂದು ಸೇರಿತ್ತು. ಅವರಲ್ಲಿ ಒಬ್ಬ ಮಾತ್ರ ಸೊಗಸಾದ ಉಡುಪನ್ನು ಧರಿಸಿ ತಲೆ ಕೂದಲನ್ನು ಥಳಥಳಿಸುವಂತೆ ಬಾಚಿ ಥೇಟಾಗಿದ್ದ. ಅಲ್ಲದೆ ಹೆಂಗಸಿನ ಹುಟ್ಟು ಹಕ್ಕಿಗೆ ಧಕ್ಕೆ ಬಾರದಂತೆ ಗಂಡು ಎಷ್ಟು ಆಭರಣಗಳನ್ನು ತೊಡಬಹುದೋ ಅಷ್ಟನ್ನೂ ಅವನು ತೊಟ್ಟಿದ್ದ. “ಭಕ್ತ ಕನಸಿನಲ್ಲಿ ತನ್ನನ್ನು ನೆನಸಿದರೂ ಮುನಿಸಿಕೊಳ್ಳದೆ ಒಲಿಸಿಕೊಳ್ಳುವ ಸರ್ವಾಂತರ್ಯಾಮಿ ಪರಮಾತ್ಮನಂತೆ ಪೋಲೀಸ್ ಅಧಿಕಾರಿಗಳು ನೆನಸಿಕೊಳ್ಳುವ ಮಾತ್ರದಿಂದಲೇ ಮುಂಬಂದಿದ್ದಾರೆ” ಎಂದ ಆ ಶ್ರೀಮಂತ ಪುತ್ರ. ಉಳಿದ ಏದಾರುಮಂದಿ ಹುಡುಗರೂ “ಆಹಾ!............ಚಿನ್ನದಂಥ

ಮಾತುಗಳು" ಎಂದು ಒಣಗಿದ ಕಂಠದಿಂದ ಕೂಗಿದರು. ಒಬ್ಬ ಮಾತ್ರ ಕಿಸೆಯಿಂದ ಒಂದು ರೇಷ್ಮೆ ವಸ್ತ್ರದಲ್ಲಿ ಬೈಂಡಾಗಿದ್ದ ಪುಸ್ತಕವನ್ನು ಹೊರತೆಗೆದು ಅದರಲ್ಲಿ 'ಚಿನ್ನದಂಥ' ಆ ಮಾತುಗಳನ್ನು ಬರೆದು "ಇದನ್ನು ನಾಳೆಯೇ ಜನರಲ್ಲಿ ಸಾರಬೇಕು" ಎಂದ. ಉಳಿದವರೆಲ್ಲ "ಅಗತ್ಯವಾಗಿ........ಅಗತ್ಯವಾಗಿ" ಎಂದರು. ಶ್ರೀಮಂತ ಪುತ್ರ ಸುಪ್ರೀತನಾಗಿ, ಸುಪ್ರಸನ್ನನಾಗಿ "ನಡೆಯಿರಿ........ಹಾಗೆಯೇ ಹೋಗಿ "ಹೊಟೇಲ್ ಡಿ ಉಮರ್ ಖಯಾಂ"ನಲ್ಲಿ ಬಾದಾಮಿ ಹಲ್ವ ತಿನ್ನೋಣ" ಎಂದ. ಉಳಿದವರೆಲ್ಲರೂ "ಅಗತ್ಯವಾಗಿ........ಅಗತ್ಯವಾಗಿ" ಎನ್ನುತ್ತಾ ಅವನನ್ನು ಹಿಂಬಾಲಿಸಿದರು.

ಶ್ರೀಮಂತ ಪುತ್ರನಿಗೂ ಮತ್ತು ಅವನ ಈ ಮಿತ್ರ ಮಂಡಲಕ್ಕೂ ಇವೇ ನಿತ್ಯದ ದಿನಚರಿ, ಉದ್ಯೋಗ. ರಸ್ತೆಯಲ್ಲೋ, ಮೈದಾನದಲ್ಲೋ ಅಥವಾ ಮರದಡಿಯಲ್ಲೋ ಸೇರಿ ಕಛೇರಿ ಪ್ರಾರಂಭಿಸಿ ಹೋಟೆಲ್‌ನಲ್ಲೋ, 'ಬೀಚ್'ನಲ್ಲೋ, ಸಿನಿಮಾ ಮಂದಿರದಲ್ಲೋ ಮುಕ್ತಾಯ ಮಾಡುವುದು. ಇದರಿಂದ ಶ್ರೀಮಂತ ಪುತ್ರನಿಗೆ ತಿಂದ ಅನ್ನ ಜೀರ್ಣವಾಗುವುದಕ್ಕೆ ಒಂದು ಮಾರ್ಗ; ಅಲ್ಲದೆ ಹಸ್ದ ಹೊಟ್ಟೇನ ತೇಲಸ್ಕೊಂಡು ಓಡಾಡ್ತಿದ್ದ ಗೆಳೆಯರಿಗೂ ತಿನ್ನಬೇಕಾಗಿದ್ದ ಅನ್ನಾನ ದೊರಕಿಸಿಕೊಳ್ಳಲು ಒಂದು ಉದ್ಯೋಗ—ಒಟ್ಟಿನಲ್ಲಿ ನಿರುದ್ಯೋಗ ಸಮಸ್ಯೆಗೆ ಒಂದು ಪರಿಹಾರ. ಅಂತೂ ಆ ಏಳೆಂಟು ಜನರ ಗುಂಪು ಕ್ರಾಂತಿಪಕ್ಷದ ವೀರ ನಾಯಕನ ಚೇಲರ ಮುಖಂಡನಿಗೂ ಮತ್ತು ಪೋಲೀಸು ಅಧಿಕಾರಿಗಳಿಗೂ ಆಗಲಿದ್ದ ಮಾತುಕತೆಯನ್ನು ಕೇಳದೆಯೇ ಕಾರ್ಯ ಗೌರವದ ಮೇಲೆ "ಹೊಟೇಲ್ ಡಿ ಉಮರ್ ಖಯಾಂ" ಕಡೆ ತೆರಳಿದರು.

"ಓ ಹೋ ಹೋ ಹೋ........ಓ........ನೀವೇ ಇದೀರಲ್ಲಾ ಇಲ್ಲಿ ........ಇನ್ನೇನು ಯೋಚನೆ........ ಅರ್ಥಕೋಶವೇ ಕೈಲಿದ್ದಾಗೆ." ಎನ್ನುತ್ತಾ ಪೋಲೀಸು ಅಧಿಕಾರಿಗಳು ಎದುರು ಬಂದ ಕ್ರಾಂತಿಪಕ್ಷದ ವೀರ ನಾಯಕನ ಚೇಲರ ಮುಖಂಡನ ಕೈಯನ್ನು ಕುಲುಕಿದರು.

ಅನಂತರ ಮುಖಂಡ ಗಲಾಟೆ ಶುರುವಾದ ಬಗೆಯನ್ನು ಕಣ್ಮುಚ್ಚಿ ಕೊಂಡರೂ, ಕಿವಿ ಮುಚ್ಚಿಕೊಂಡರೂ ಅರ್ಥವಾಗುವ ರೀತಿಯಲ್ಲಿ ವರ್ಣಿಸಿ ತನ್ನ ಚೇಲರು ಹಗ್ಗದಿಂದ ಹತ್ತಿರದ ಕಂಬಕ್ಕೆ ಕಟ್ಟಿದ್ದ ಆಸಾಮಿಯ ಕಡೆ ಬೆರಳುಮಾಡಿ ಹೇಳಿದ:—"ನೋಡಿ, ಗುಲಾಮ, ಚಂಡಾಲ.... ನಿಂತಿದಾನೆ........ ನಾನೂ ಮತ್ತು ನಮ್ಮೋರು ಏನಾದರೂ ಸ್ವಲ್ಪ ತಡ ಮಾಡ್ಬಿಟ್ಟಿದ್ದಿದ್ದರೆ........ಮಗೂನೂ ಹಾರಸ್ಕೊಂಡು....ತಪ್ಪಸ್ಕೊಂಡೇ ಹೊರಟ್ಹೋಗಿರ್ತಿದ್ದ."

ಅಧಿಕಾರಿಗಳು "ಆ ಭಯವೇನೂ ಇರ್ಲಿಲ್ಲ್ಬಿಡಿ........ ಗಲಾಟೆ ಹೇಗ್ಹೋಗೆ ಬೆಳೆಯುತ್ತೋ ಅಂತ ನೋಡ್ತಾ ನಾನು ಹಿಂದೆ ಎಚ್ಚರವಾಗೇ ನಿಂತಿದ್ದೆ" ಎಂದರು.

ಅಧಿಕಾರಿಗಳ ಮಾತನ್ನು ಕೇಳುವಷ್ಟು ಸಾವಧಾನ ಸಮಾಧಾನ ವಿಲ್ಲದೆ ಮುಖಂಡ ತನ್ನ ಮಾತನ್ನೇ ಮುಂದುವರಿಸಿ, ಆ ಹಗ್ಗದಿಂದ ಬಿಗಿದಿದ್ದ ಆಸಾಮಿ, ಕೂಸನ್ನು ಎತ್ತಿಕೊಂಡು ಭಯಭೀತಳಾಗಿ ಕಂಪಿ ಸುತ್ತಿದ್ದ ಹೆಣ್ಣಿನ ಮೇಲೆ ಹಗ್ಗದಂತೆ ಕೈಯನ್ನು ಬೀಸಿ ಕೂಸನ್ನು ಕಸಿದು ಕೊಂಡು ಚಂಗನೆ ಪರಾರಿಯಾಗುವ ಪ್ರಯತ್ನದಲ್ಲಿ ತೊಡಗಿದ್ದ ಬಗೆ ಯನ್ನೂ, ಆ ವಿಷಗಳಿಗೆಯಲ್ಲಿ ತಾನೂ ಮತ್ತು ತನ್ನ ಅನುಯಾಯಿಗಳೂ (ಚೇಲರೂ) ದೇವದೂತರಂತೆ ಅಕಸ್ಮಾತ್ ಅತ್ತ ಆಡ್ಡಾಡುತ್ತಿದ್ದುದರ ಹಿರಿಮೆಯನ್ನೂ, ಎಲ್ಲ ದೇಶಕಾಲಕ್ಕೂ ಅನುಗುಣವಾಗಿ ಅನುಸರಿಸಿ ಕೊಂಡು ಹೋಗುವಂಥ ಚಾಲೂಕನ್ನು ಗಳಿಸಿ ಬಲಿಷ್ಠನಾಗಿದ್ದ ಆ ಐನಾತಿ ಆಸಾಮಿಯನ್ನು ತಾವುಗಳು ಬಂಧಿಸಿದ ವಿಶೇಷ ಬಗೆಯನ್ನೂ ಬಣ್ಣಬಣ್ಣ ವಾಗಿ ತಿಳಿಸಿದ. ಅಲ್ಲದೆ ಆಸಾಮಿ ಇನ್ನೂ ಮಗುವನ್ನು ಕಸಿಯುವ ಪ್ರಯ ತ್ನದಲ್ಲಿದ್ದಾಗಲೇ ದಿನಕ್ಕೆ ಮೂರು ಹೊತ್ತು ಪ್ರಕಟವಾಗುತ್ತಿದ್ದ "ದೇಶ ಭ್ರಷ್ಟನಾರು?" ಪತ್ರಿಕೆಯ ಸುಪ್ರಸಿದ್ಧ ಕ್ಯಾಮರಾಮ್ಯಾನ್ ಅತ್ತ ಹೋಗು ತ್ತಿದ್ದುದನ್ನು ನೋಡಿ ತಾನು ಅವನನ್ನು ಬರಮಾಡಿ ತೆಗೆಸಿದ ಛಾಯಾ ಚಿತ್ರದ 'ನೆಗೆಟಿವ್'ನ್ನೂ ಅಧಿಕಾರಿಗಳಿಗೆ ತೋರಿಸಿದ. ತನ್ನ ಮಾತಿನ ಉಪಸಂಹಾರ ಮಾಡುತ್ತಾ ಆ ಚೇಲರ ಮುಖಂಡ ಕಂಬಕ್ಕೆ ಕಟ್ಟಿದ್ದ

ಆಸಾಮಿಯ ಕಡೆ ಭಾರವಾದ ದೃಷ್ಟಿಯನ್ನು ಬೀರಿ ಅಧಿಕಾರಿಗಳಿಗೆ ಹೇಳಿದ:—"ನಾಲ್ಕೈದು ದಿನದಿಂದ ಪುರಜನರಲ್ಲೆಲ್ಲಾ ಹಾಹಾಕಾರ ಎಬ್ಬಿಸಿರುವುದಕ್ಕೆ ಇವನೇ ಮೂಲನೆಂಬುದರಲ್ಲಿ ಸಂದೇಹ ಕೊಂಚವೂ ಇಲ್ಲ. ಈ ನೀಚ ಕಾರ್ಯದಲ್ಲೇ ತೊಡಗುವ ಸುಪ್ರಸಿದ್ಧ ಅಥವ ಜನಾಂಗಕ್ಕೇ ಇವನು ಸೇರಿರುವನೆಂಬುದರಲ್ಲೂ ಸಂಶಯವಿಲ್ಲ........ಅಂತೂ ನಮ್ಮ ಕರ್ತವ್ಯವನ್ನು ಮಾಡಿದ್ದಾಯಿತು. ಅವನನ್ನು ನಿಮಗೆ ಒಪ್ಪಿಸಿದ್ದೇವೆ ........ಇನ್ನು ನ್ಯಾಯಾಸ್ಥಾನದಲ್ಲಿ........" ಎಂದು ಉತ್ತರವನ್ನು ನಿರೀಕ್ಷಣೆ ಮಾಡುವ ಒಂದು ನಮೂನೆ ಸಂಕೋಚವನ್ನು ಹೊರಸೂಸಿದ.

ಅದಕ್ಕೆ ಉತ್ತರವಾಗಿ ಅಧಿಕಾರಿಗಳು "ನಿಮ್ಮ ಈ ಸೇವೆಯನ್ನು ಎಷ್ಟು ಸ್ತುತಿಸಿದರೂ ಕಡಿಮೆಯೇ........" ಎಂದವರೇ ಇದ್ದಕ್ಕಿದ್ದಂತೆ ತಮ್ಮನ್ನು ತಾವೇ ಸುಧಾರಿಸಿಕೊಂಡವರಂತೆ ಮಾತನ್ನು ಮುಂದುವರಿಸಿದರು:—"ನಿಮ್ಮ ಸಾಹಸಾನೇ ನೋಡ್ತಾ ನಾನು ಹಿಂದೇನೇ ನಿಂತಿದ್ದೆ....ನೀವೇನಾದ್ರೂ ಅಕಸ್ಮಾತ್ ಇತ್ತ ನುಳೀದಿದ್ರೆ (ಹಗ್ಗದಿಂದ ಕಟ್ಟಿದ್ದ ಆಸಾಮೀನ ಸೂಚಿಸುತ್ತಾ) ಈ ಆಸಾಮೀನೇ ಗುಮಾನಿ ಮಾಡಿ ಹಿಂಬಾಲಿಸುತ್ತಿದ್ದ ನಾನೇ ನಿಮ್ಮ ಕೆಲಸ ಪೂರೈಸ್ಬೇಕಾಗಿತ್ತು....ಅಂದ್ಹಾಗೆ ....ಆ 'ನೆಗೆಟೀವ್' ಕೊಡಿ ಇಲ್ಲಿ....ಅದನ್ನ 'ಡೆವಲಪ್ಪೂ, ಪ್ರಿಂಟೂ' ಮಾಡ್ಸಿ ರುಜುವಾತಾಗಿ ಹಾಜರ್ಮಾಡಬೇಕು" ಎಂದು 'ನೆಗಟೀವ'ನ್ನು ಮುಖಂಡನಿಂದ ತೆಗೆದುಕೊಂಡು ನಗುವ ಪ್ರಯತ್ನ ಮಾಡಿದರು. ಆದರೆ ಬಹಳ ಹೊತ್ತಿನ ತೂಕಡಿಕೆಯಿಂದ ಅವರ ಕಣ್ಣುರೆಪ್ಪೆ ಬಹಳ ತೂಕವಾಗಿ ಕುಸಿಯುವುದರಲ್ಲಿದ್ದುದರಿಂದ ಅವರು ಕಣ್ಣುಜ್ಜಿಕೊಳ್ಳಬೇಕಾಯಿತು. ಜೊತೆಗೆ ಆಕಳಿಕೆಯ ಬಾಧೆ ಬೇರೆ. ಎರಡು ಬಾರಿ ಆಕಳಿಸಿ ಮೂರನೆಯ ಬಾರಿ ದೀರ್ಘವಾಗಿ ತಾನೇ ತಾನಾಗಿ ಹೊರಹುಮ್ಮುತ್ತಿದ್ದ ಮತ್ತೊಂದು ಆಕಳಿಕೆಗೆ ದಾರಿ ಮಾಡಲು ಅವರು ವಿಶಾಲವಾಗಿ ಬಾಯನ್ನು ತೆರೆಯಲೇಬೇಕಾಯಿತು. ಸಾಲದುದಕ್ಕೆ ಗಾಳಿಯಲ್ಲೇ ಹೊಂಚು ಹಾಕುತ್ತಿದ್ದ ದೊಡ್ಡ ಸೊಳ್ಳೆಯೊಂದು ಇದೇ ಅವಕಾಶವನ್ನೇ ಉಪಯೋಗಿಸಿಕೊಂಡು ಅವರ ಬಾಯನ್ನು ಪ್ರವೇಶಿಸಲು ನುಗ್ಗುತ್ತಿದ್ದುದನ್ನು ಅವರು ಚಪ್ಪಾಳೆ

ಬಡಿದು ಅಪ್ಪಚ್ಚಿ ಮಾಡುವಷ್ಟು ತ್ರಾಣವಿಲ್ಲದೆ ಕೈ ಚಿಟಿಕಿಯಿಂದಲೇ ಬಾರಿ ಬಾರಿಗೂ ದೂಡಬೇಕಾಯಿತು. ಸೊಳ್ಳೆ ಎರಡು ಮೂರು ಬಾರಿ ಮರಳಿ ಮರಳಿ ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದುವು. ಕಡೆಗೆ ಅಧಿಕಾರಿಗಳ ಮುಂದೆಯೇ ನಿಂತಿದ್ದ ಚೇಲರ ಮುಖಂಡನವರೆಗೂ ಹಿಂದಕ್ಕೆ ಹೋಗಿ ಅಲ್ಲಿಂದ ಅಧಿಕಾರಿಗಳ ಕೈ ಚಿಟಕೆಯನ್ನೂ ಮೀರುವಂತೆ ರಭಸ ಚಮತ್ಕಾರದಿಂದ ಅವರ ಬಾಯೊಳಗೆ ನುಗ್ಗಬೇಕೆಂದು ಅದು ಛಲದಿಂದ ನಿರ್ಧರಿಸಿತ್ತು. ಆದರೆ ಅಷ್ಟರಲ್ಲೇ ಆ ಕ್ರಾಂತಿಪಕ್ಷದ ವೀರ ನಾಯಕನ ಚೇಲರ ಮುಖಂಡ ಅದನ್ನು ಒಂದೇ ಚಪ್ಪಾಳೆಯಲ್ಲಿ ಅಪ್ಪಚ್ಚಿ ಮಾಡಿ ಕೈ ಕೊಡವಿಕೊಳ್ಳುತ್ತಾ ಬಾಯ್ಬಿಟ್ಟುಕೊಂಡು ಅಧಿಕಾರಿಗಳ ಮುಖ ನೋಡಿದ. ಅಧಿಕಾರಿಗಳಿಗೂ ಆಕಳಿಕೆಗಳ ಬಾಧೆ ಆರಿದ್ದುದರಿಂದ ಹಿಂದೆಯೇ ನಗಬೇಕೆಂದು ಮಾಡಿದ್ದ ನಿರ್ಧಾರವನ್ನು ಈಗ ಬಡ್ಡಿ ಸಹಿತ ಕಾರ್ಯ ರೂಪಕ್ಕೆ ತರುತ್ತಾ ಅರಳಿನ ಮೂಗಿನಿಂದ "ಒಳ್ಳೇ ಕೆಲ್ಸಾನೇ ಮಾಡಿದ್ರಿ....ಗೋಳ್ಹೊಯ್ಕೋತಾ ಇತ್ತು ಒಂದೇ ಸಮಕ್ಕೆ .......ಹಾಳ್ಮುಂಡೇದು...." ಎಂದು, ತಕ್ಷಣವೇ ಏನನ್ನೊ ಧ್ಯೇನಿಸಿಕೊಂಡವರಂತೆ........ "ಅಂದ್ಹಾಗೆ, ನನ್ನ ಎದುರ್ಗೊಂಡು-ಮೊದಲು ನನ್ನ ಜೊತೆ ಮಾತಾಡಿದ್ನಲ್ಲಾ ಆ ಹುಡುಗ ಎಲ್ಲಿ?" ಎಂದು ಕೇಳಿದರು. ಚೇಲರ ಗುಂಪಿನಲ್ಲಿದ್ದ ಒಬ್ಬನಿಂದ ಉತ್ತರ ಬಂತು: "ಅವನು ಊಟಾ ಮಾಡಕ್ಹೋಯ್ದ ಮನೇಗೆ....ಯಾಕೆ ಏನಾದ್ರೂ ಕೆಲಸ ಇತ್ತೇನು?" ಎಂದು.

"ತಾವು ಏನೂ ಸಂಕೋಚ ಪಡ್ಬೇಡಿ........ಏನಾದರೂ ಮಾಡ್ಬೋದಿದ್ರೆ ಅಪ್ಣೆ, ಇನ್ನೂ ಬೇಕಾದರೆ ನಮ್ಮ ಗುಂಪೇ ನಿಮ್ಸೇವೆಗೆ ಸಿದ್ಧ" ಎಂದು ಮುಖಂಡ ಅಧಿಕಾರ ವಾಣಿಯಿಂದ ಹೇಳಿದ.

"ಏನಿಲ್ಲಾ, ಠಾಣೇಗೆ ಸ್ವಲ್ಪ ಫೋನ್‌ಮಾಡಿ ಈ ಆಸಾಮಿನ ಬಳೀ ತೊಡ್ಸಿ ಕರ್ಕೊಂಡ್ಹೋಗೋಕ್ಕೆ ನಾಲ್ಕು ಸಾಮಾನ್ಯ ಪೋಲೀಸ್ನೋರ್ನ ತಕ್ಷಣ ಕಳ್ಸೋಹಾಗೆ ಹೇಳ್ಬೇಕಾಗಿತ್ತು ಅಷ್ಟೆ" ಎಂದರು ಅಧಿಕಾರಿಗಳು.

ಅವರು ಹೇಳಿದ್ದೇ ತಡ ಮೊದಲು ಉತ್ತರಕೊಟ್ಟ ಚೇಲ ತನ್ನ ಮುಖಂಡನ ಹತ್ತಿರ ಬಂದು ಅವನ ನಿರೀಕ್ಷಣೆಗೆ ಸಲ್ಲುವ ರೀತಿಯಲ್ಲಿ ನಮಸ್ಕರಿಸಿ ಫೋನ್ ಮಾಡೋದಕ್ಕೆ ಹೊರಟೇಬಿಟ್ಟ. ಕೇವಲ ಹತ್ತೇ ನಿಮಿಷದಲ್ಲಿ ಸಾಮಾನ್ಯ ಪೋಲೀಸ್ನೋರೂ ಬಂದಿದ್ದಾಯಿತು. ಪೋಲೀಸು ಅಧಿಕಾರಿಗಳು ಪರಿವಾರ ಸಮೇತನಾದ ಕ್ರಾಂತಿಪಕ್ಷದ ವೀರ ನಾಯಕನ ಚೇಲರ ಮುಖಂಡನನ್ನು ಗೌರವದಿಂದ ಬೀಳ್ಕೊಟ್ಟು ಸಾಮಾನ್ಯ ಪೋಲೀಸರನ್ನು ಕುರಿತು ಆಸಾಮಿಗೆ ಕಟ್ಟಿದ್ದ ಹಗ್ಗವನ್ನು ಬಿಚ್ಚಿ ಅವನ ಕೈಗೆ ಬಳೆ ತೊಡಿಸಿ ಠಾಣೆಗೆ ಕರದೊಯ್ಯುವಂತೆ ಅಪ್ಪಣೆ ಯಿತ್ತು ತಾವು ಚಹಾ ಕುಡಿಯುವುದಕ್ಕಾಗಿ ಪಕ್ಕದಲ್ಲಿದ್ದ 'ಹೊಟೇಲ್ ಡಿ ಲಕ್ಸ್' ಕಡೆ ತೆರಳಿದರು.

ಚಹಾ ಕುಡಿದ ನಂತರ ಠಾಣೆಗೆ ಹಿಂತಿರುಗಿದೊಡನೆಯೆ ಅಧಿಕಾರಿಗಳು ಕೇಸನ್ನು ಯಥಾವತ್ತಾಗಿ ಸಿದ್ಧಪಡಿಸಿ ಜೊತೆಗೆ ಒಂದು ವಿಶೇಷ ವರದಿಯನ್ನೂ ಬರೆದು ಅದರಲ್ಲಿ ತಾವು ಜನರ ನಿತ್ಯಜೀವನದ ಶಾಂತಿ ಹಾಗೂ ಭದ್ರತೆಗೇ ಧಕ್ಕೆ ತರುವಂತಹ ನೀಚ ಕಾರ್ಯದಲ್ಲಿ ತೊಡಗಿದ್ದ ಆಸಾಮಿಯನ್ನು ಬೆಳಗ್ಗಿನಿಂದ ಹೊಂಚುಹಾಕಿ ಹಿಡಿದುದರ ಚಮತ್ಕಾರವನ್ನು ಬಣ್ಣಬಣ್ಣವಾಗಿ ಬರೆದರು. ಅಲ್ಲದೆ ತಮ್ಮ ಸ್ವಂತ ವಿವೇಚನೆಯಿಂದ ಸದಾ ಸಿದ್ಧವಾದ 'ಕ್ಯಾಮರಾ' ದಿಂದ ಕೂಡಿದ್ದ ಒಬ್ಬ 'ಕ್ಯಾಮರಾಮನ್ನ'ನ್ನು ತಾವು ಬೆಳಗ್ಗಿನಿಂದ ಹಿಂದೆ ಹಾಕಿಕೊಂಡು ಸಕಾಲದಲ್ಲಿ ಅವನಿಂದ ಉಪಯೋಗ ಹೊಂದಿದರೆಂದೂ ಬರೆದು ರುಜು ವಾತಾಗಿ ತಾವು ಹಾಜರು ಮಾಡಿದ 'ನೆಗೆಟಿವ್'ನ ಮಹತ್ವವನ್ನೂ ವರ್ಣಿಸಿದರು.

ಕೂಡಲೆ ಕೇಸನ್ನು ಹಾಜರುಮಾಡಿದ್ದೂ ಆಯಿತು. ಪೋಲೀಸು ಅಧಿಕಾರಿಗಳಿಗೆ ಸೂಕ್ತವಾದ ಪ್ರಶಸ್ತಿ ಪತ್ರವನ್ನೂ ಹಾಗೂ ಸುವರ್ಣ ಪದಕವನ್ನೂ ಒಳಾಡಳಿತದ ಮಂತ್ರಿಗಳು ಮಂಜೂರು ಮಾಡಿದ್ದೂ ಆಯಿತು.. ಇಡೀ ರಾಜಧಾನಿ ಹಾಗೂ ರಾಷ್ಟ್ರದಲ್ಲೇ ಕಳವಳವೆಬ್ಬಿಸಿದ್ದ ಈ "ಕೇಸು" ಅತಿ ಮುಖ್ಯವೆಂದು ಪರಿಗಣಿತವಾಗಿ ಕೇಂದ್ರ

ನ್ಯಾಯಸ್ಥಾನದಲ್ಲೇ ಇದರ "ಕೇಳಿಕೆ"ಗಳು ನಡೆಯಬೇಕೆಂದು ನಿಶ್ಚಯ ವಾಗಿ ಆಗಲೇ ಕೇಸಿನ ಮೂರು "ಕೇಳಿಕೆ"ಗಳೂ ಮುಗಿದು ಮುಕ್ತಾಯ ಚರ್ಚೆ ಮತ್ತು ತೀರ್ಪಿನ ದಿನವೂ ಬಂತು.

**ಆದ್ದರಿಂದಲೇ ನ್ಯಾಯಸ್ಥಾನಕ್ಕೆ ಅಂದು ಜನರ ಆಗಮನ; ಎಲ್ಲಿಲ್ಲದ ಗಲಾಟೆ.**

೩

ನಾನಾ ರಸ್ತೆಗಳಿಂದಲೂ ಜನ ನ್ಯಾಯಸ್ಥಾನದ ಕಡೆಗೆ ಗಿಜಿ ಗಿಜಿ ಬರುತ್ತಿದ್ದಾರೆ. ಎಲ್ಲರೂ ಕಲಿತವರು, ತಮ್ಮದೇ ಆದ ವ್ಯಕ್ತಿತ್ವ ವನ್ನು ಸ್ವಾತಂತ್ರ್ಯದ ನೆರಳಿನಲ್ಲಿ ಬೆಳೆಸಿಕೊಂಡು ಬಂದಿದ್ದರು. ಸರಿ, ದಾರಿಯುದ್ದಕ್ಕೂ ಅವರವರಲ್ಲೆ ಸ್ವಾರಸ್ಯವಾದ ಚರ್ಚೆಗಳು. ಅವರೆಲ್ಲ ಶಿಸ್ತಿನ ಪಾಠವನ್ನು ಚೆನ್ನಾಗಿ ಕಲಿತಿದ್ದುದರಿಂದ ಒಬ್ಬರು ಇನ್ನೊಬ್ಬರ ವಿಚಾರ ದೃಷ್ಟಿಗೆ ಬೆಲೆ ಕೊಟ್ಟು ಚರ್ಚೆಯನ್ನು ಶಾಂತ ರೀತಿಯಿಂದ ನಡೆ ಸುತ್ತಿದ್ದರು. ಅವರ ಸ್ಫೂರ್ತಿಪೂರಿತವಾದ ಮಾತುಕತೆಗಳಿಂದ ಅಲೆ ಗಳಂತೆ ಆಗಾಗ ಏಳುತ್ತಿದ್ದ ವಿಚಾರ ತರಂಗ ಆಕಾಶವನ್ನು ಭೇದಿಸು ವಂತಿತ್ತು.

ಕೆಲವರು ತಲೆ ತಗ್ಗಿಸಿಕೊಂಡು ತಮ್ಮ ತಮ್ಮಲ್ಲೆ ಚರ್ಚೆ ನಡೆಸಿ ಕೊಂಡು ನಡೆಯುತ್ತಿದ್ದರು. ಉದ್ದ ನಾಲಗೆಯ ಹಲವರು ಅವರ ಏಕಾಂತ ಭಂಗ ಮಾಡಲು ಹವಣಿಸುತ್ತಿದ್ದರು. ಆಗ ಅವರು ಮುಂದಿ ಯಲ್ಲಿ ನುಸುಳಿಕೊಂಡು ಅವರ ನಾಲಗೆಯಿಂದ ಪಾರಾಗುತ್ತಿದ್ದರು.

ಮುದುಕರ ಗುಂಪು ಗುಂಪೆ ಕೆಲವು ಕಡೆ ಎಂದೂ ಇಲ್ಲದ ಸ್ಫೂರ್ತಿ ಉತ್ಸಾಹಗಳಿಂದ ನಡೆಯುತ್ತಿದ್ದುವು. ಅವರು ತಮ್ಮ ಯೌವನದ ಅನು ಭವವನ್ನೆ ಒಬ್ಬರಿಗೊಬ್ಬರು ಹೇಳಿಕೊಳ್ಳುತ್ತಾ ಯುವಕರನ್ನು ಮೀರಿಸು ವಂತೆ ಚುರುಗನೆ ನಡೆಯುತ್ತಿದ್ದರು.

"ಮಕ್ಕಳನ್ನು ಕದ್ದುಕೊಂಡು ಹೋಗಿ ಕೊಲ್ಲುವುದು! ಅಬ್ಬಬ್ಬ! ಎಷ್ಟು ಮಕ್ಕಳು ಆಗಲೇ ಹೋಗಿಬಿಟ್ಟವೆಯೋ!........ಅದೊಂದು

ನೀಚ ಜನರ ಗುಂಪೇ ಇಲ್ಲಿಗೆ ಬಂದುಬಿಟ್ಟದೆಯಂತೆ. ಅಲ್ಲ, ಇದುವರೆಗೂ ರಾತ್ರಿ ಈ ನೀಚರು ಮಕ್ಕಳನ್ನು ಕಸಿದು ಪರಾರಿಯಾಗುತ್ತಿದ್ದುದು ನಿನ್ನೆ ಮೊನ್ನೆ ಕೇಳಿದೆ. ಆದರೆ ಈ ನೀಚನ್ನ ನೋಡಿದ್ರಾ....ಆ!.... ಹಗಲ್ನಲ್ಲೇ........ಅದೂ ! ಈ ನಮ್ಮ ದೇಶದ ಪೋಲೀಸ್ನೋರೆದುರ್ಗೇ.... ....ಛೆ!" ಎಂದರು ಒಬ್ಬ ಮುದುಕರು.

"ಅದೇ ರಾತ್ರೀ ಹೊತ್ನೂ ಅಂತ ನಾನೂ ಕೇಳಿದ್ದು........ ಏನೋ ಯಾವ್ನಕ್ಷತ್ರವೋ ಏನೊ........ಎಲ್ಲಾ ಸ್ವಲ್ಪ್ರಲ್ಲೇ ಸರೀ ಹೋಗುತ್ತೇಂತ ನಾನೂ..." ಎಂದರು ನೆರೆಯ ಮುದುಕರು. ಅವರು ಎರಡು ದಿನಗಳ ಹಿಂದೆ ತಾನೆ ತಮ್ಮ ಮನೇಲಿ ರಾತ್ರಿ ಹೊತ್ತು ಕಾಟ ಕೊಡ್ತಿದ್ದ ದೆವ್ವಗಳನ್ನು ದುಡ್ಡು ಖರ್ಚ್ಮಾಡಿ, ಮಂತ್ರಗಳನ್ನು ಹೇಳಿಸಿ ಓಡಿಸ್ದೇ ಅಂತ ಅಂದುಕೊಂಡಿದ್ರು.

ಅವರ ಮಾತನ್ನು ಕೇಳಿ "ಸಾಕು ಸುಮ್ನಿರೀ ಸ್ವಾಮಿ........ ನಕ್ಷತ್ರವಂತೆ... ...ಕೆಟ್ಟಿದ್ದಂತೆ........ ಅಲ್ಲಾ, ನಕ್ಷತ್ರ ತಪ್ಮಾಡಿದ್ರೂ ದರವರ ಎಳ್ಕೊಂಡ್ಬಂದು ನ್ಯಾಯಾಸ್ಥಾನದಲ್ಲಿ ಸರ್ಯಾಗಿ ಶಿಕ್ಷೇ ಕೊಟ್ಟು ಬಲೀ ಹಾಕೋ ನಮ್ದೇಶ್ದಲ್ಲಿ...... ಒಳ್ಳೇ ಮಾತ್ನೇ ಹೇಳ್ತೀರಿ ನೀವೂನೂ!.......ಇನ್ನೂ ನಾನು ಯೋಚಿಸ್ತಿರೋದು ಇವತ್ತು ಸಿಕ್ಕಿ ದ್ದಿರೋ ಚಂಡಾಲನ್ಗೆ ನಮ್ಮ ನ್ಯಾಯಾಧೀಶರು ಸಾವ್ಗಿಂತ ದೊಡ್ಡ ಶಿಕ್ಷೆ ಒಂದನ್ನು ಕೊಡ್ತಾರೋ ಏನೋ ಅಂತ" ಎಂದ ಒಬ್ಬ ಯುವಕ. ಅವನು ಹೇಗೋ ಮುದುಕರ ಗುಂಪಿನೊಳಗೆ ಬಂದು ಸೇರಿಬಿಟ್ಟಿದ್ದ. ಕಾರೊಂದು ಬಹಳ ಜೋರಾಗಿ ಶಬ್ದಮಾಡುತ್ತಾ ಬಂದಿದ್ದರಿಂದ ಮತ್ತೊಬ್ಬ ಮುದುಕರು ಮಾತನಾಡಲು ಬಾಯ್ತೆರೆದಿದ್ದವರು ಹಾಗೆಯೇ ಸುಮ್ಮನಾದರು.

ಮುದುಕರ ಗುಂಪಿನ ಹಿಂದೆ ಅಚ್ಚುಕಟ್ಟಾದ ವ್ಯಕ್ತಿನ ಆಸಾಮಿ —ಒಬ್ಬ ಗೂಂಡ—ಒಂಟಿಯಾಗಿ ನಡೆದು ಬರುತ್ತಿದ್ದ. ಅವನು ಧರಿ ಸಿದ್ದ ಚೆಂದಿ ಉಡುಪು ಅವನಿಗೆ ಯಾರ ಜೊತೆ ಬೆರೆಯುವ ಅವಕಾಶ ವನ್ನೂ ಕೊಡುವ ಹಾಗಿರಲಿಲ್ಲ. ಆ ರಾಷ್ಟ್ರದಲ್ಲಿ 'ಇವತ್ತಲ್ಲಾ ನಾಳೇ

ಸರೀ ಹೋಗಬಹುದು........ಎಷ್ಟೇ ಆಗಲಿ ಮಾನವ ಹೃದಯ ಅಲ್ಲವೇ!' ಎನ್ನುವ ಮೂಲ ನಿಯಮವನ್ನು ಅನುಸರಿಸಿ ಗೂಂಡಾಗಳಿಗೂ ನಾಲ್ಕು ಅವಕಾಶಗಳನ್ನು ಕೊಡುವ ಪದ್ಧತಿ ನ್ಯಾಯಾಸ್ಥಾನದಲ್ಲಿತ್ತು. ಈ ಗೂಂಡ ಆಗಲೆ ಮೂರು ಅವಕಾಶಗಳನ್ನೂ ಉಪಯೋಗಿಸ್ಕೊಂಡು ನಾಲ್ಕ್ನೇದಕ್ಕೆ ಹೊಂಚ್ಹಾಕ್ತಾ ಇದ್ದ. ಎಲ್ಲರೂ ಗುಂಪು ಗುಂಪಾಗಿ ಹೋಗ್ತಾ ಇರ್ಬೇಕಾದ್ರೆ ತಾನೊಬ್ಬನೇ ಒಂಟಿಯಾಗಿ ನಡೀಬೇಕಾಗ್ಬಂದಿದ್ದು ಅವನ್ಗೆ ಒಂದ್ಕಡೆ ಕೋಪ. ತನ್ನಲ್ಲಿರೋ ಬಲವೆಲ್ಲ ವ್ಯರ್ಥವಾಗ್ತಾ ಇದ್ಯಲ್ಲಾ ಅಂತ ಇನ್ನೊಂದ್ಕಡೆ ದುಃಖ; ರೋಷ. ಅವನು ಹಾಗೇ 'ನದೀ ಸೇತುವೆ ರಸ್ತೇ'ನ ನೋಡ್ದ. ಪಕ್ಕದಲ್ಲಿ ಒಂದು ಬೆಣಚ್ಕಲ್ಲು ಬಿದ್ದಿತ್ತು. ಅದನ್ನು ಕೈಗೆ ತೆಗೆದುಕೊಂಡಿದ್ದು ನದೀಗೆ ತೂಯ್ದು ಬಿಟ್ಟು ಕೈ ಕೊಡವ್ಕೊಂಡ.

ಆ ಬೆಣಚ್ಕಲ್ಗೆ ಒಳ್ಳೇ ಕಾಂಕ್ರೀಟ್ ರಸ್ತೇಮೇಲಿದ್ದೂ ಇದ್ದೂ ಬಹಳ ಅಭ್ಯಾಸವಾಗ್ಹೋಗಿತ್ತು. ತನ್ನ ಮೇಲೆ ನಯವಾಗಿ ಕಾಲೂರ್ತಾ ಅಷ್ಟೇ ನಯವಾಗಿ ಜನ ಮಾತಾಡ್ಕೊಂಡ್ಹೋಗೋದನ್ನೂ ಕೇಳಿ ಕೇಳಿ ಅದಕ್ಕೆ ಅಭ್ಯಾಸವಾಗ್ಹೋಗಿತ್ತು. ಈಗ ಇಂತಹ ಒರಟಾದ ಕೈಗಳಿಗೆ ಸಿಕ್ಕಿ ಅದರ ಮೈಯೆಲ್ಲ ರೋಮಾಂಚವಾಗಿ ಭೀತಿ ಎದ್ದಿತು. ಗಾಳಿಯಲ್ಲಿ ಎಸೆದ ಮೇಲಂತೂ ಅದು ಭಯದಿಂದ ತಲ್ಲಣಿಸುತ್ತಾ ನದಿಯ ದೊಡ್ಡ ಬಂಡೆಯೊಂದರ ಮೇಲೆ 'ಪಟ್' ಎಂದು ಬಿದ್ದು ಇನ್ನೇನು ಎರಡು ಹೋಳಾಗಿ ಬಿಡುವುದರಲ್ಲಿತ್ತು. ಆ ಪರಿಸ್ಥಿತಿಯಲ್ಲೂ ಅದು ಅಭ್ಯಾಸ ಬಲದಿಂದ ಸಾಧನೆ ಮಾಡಿದ್ದ ವಿವೇಚನೆ ಕಳೆದುಕೊಳ್ಳದೆ ಬಂಡೆಯನ್ನು ಕುರಿತು ನಮ್ರವಾಗಿ ಹೇಳಿತು: "ಕ್ಷಮಿಸಬೇಕು, ತೊಂದರೆ ಆಯಿತು" ಎಂದು. ಬಂಡೆ ಈ ಮಾತನ್ನು ಕೇಳಿ ಸಿಟ್ಟಿನಿಂದ ಉರಿದು ಬೀಳುತ್ತಾ ಹೇಳಿತು: "ಛಿ, ಕುಲಗೆಟ್ಟ ಮುಂಡೇದೆ, ಕೋತಿಗ್ಳ ಯುಗ ಮುಗ್ದು ಈ ಮನುಷ್ಯರ ಯುಗ ಷುರು ಆದಾಗಿನಿಂದ ಇಲ್ಲೀವರ್ಗೆ ಲೆಕ್ಕಹಾಕಿದ್ರೂನೂ ನಮ್ಮಾಯುಷ್ಯದಲ್ಲಿ ಒಂದು ಗಳಿಗೆ ಕೂಡ ಆಗೊಲ್ಲ. ಇನ್ನು, ನೀನು ಅಥ್ವಾ ನಮ್ಲೊಕ್ದಲ್ಲಿ ಒಂದು ಕಣ್ಮಿಟಿಕ್ನೋ ಅಷ್ಟುಕಾಲ ಆ ರಸ್ತೆ ಮೇಲಿದ್ದಾಕ್ಷಣ್ವೇ ನಿನ್ಕುಲಾನೇ ಮರೆತ ಡೋದೇ...ಆ !.... ನಿನ್ನಾ

ಲ್ಗೇಗೆ 'ಕ್ಷಮಿಸ್ಬೇಕೂ'ಂತ ಹೇಳೋಕ್ಕಾರೂ ಹೇಗ್ಬಂತು.... ಸೀಳ್ಬಿಟ್ಟೇ ನ್ನೋಡು ನಿನ್ನಾಲ್ಗೇನಾ!" ಎಂದು ಬಂಡೆ ಸಿಟ್ಟಿನಿಂದ ಇನ್ನೇನು ಬೆಣಚ್ಕಲ್ಲಿನ ಮೇಲೆ ಉರುಳಿಬಿಡುವುದರಲ್ಲಿತ್ತು. ಆದರೆ ಅಷ್ಟರಲ್ಲೇ ಬೆಣಚ್ಕಲ್ಲು ತತ್ತರಿಸುತ್ತಾ ನಾಚಿಕೆಯಿಂದ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಯಿತು.

ಬೆಣಚ್ಕಲ್ಲು ಬಂಡೆಯ ಮೇಲೆ ಬಿದ್ದ ರೀತಿ, ಬಂಡೆ ಕೊಂಚ ಅಲುಗಾಡಿದ ಬಗೆ ಮತ್ತು ಬೆಣಚ್ಕಲ್ಲು ಪ್ರವಾಹದಲ್ಲಿ ಕೊಚ್ಚಿಕೊಂಡು ಹೋದ ತರಹ—ಇವನ್ನೆಲ್ಲಾ ನೋಡಿದರೆ, ಮೇಲೆ ಹೇಳಿದ ರೀತಿಯಲ್ಲಿ ಬೆಣಚ್ಕಲ್ಗೂ ಮತ್ತು ಬಂಡೇಗೂ ಬಂಡೆಗ್ಳ ಭಾಷೇಲೇ ಸಂಭಾಷಣೆ ನಡದೇ ಇದ್ದಿರಬೇಕು.

ಗೂಂಡನಿಗೆ ಕೈ ಆಡಿಸಿದುದರಿಂದ ಸ್ವಲ್ಪ ತೃಪ್ತಿಯಾದಂತಾಗಿ ಚಟ ಸ್ವಲ್ಪ ತಣಿದಂತಾಯಿತು. ಆದ್ದರಿಂದ ಅವನು ಇದ್ದದ್ದರಲ್ಲಿ ನಿರಾತಂಕವಾಗಿ ಕಾಲುಹಾಕುತ್ತಾ ಹೊರಟ.

ಗೂಂಡನ ಹಿಂದೆ ವಿದ್ಯಾರ್ಥಿಗಳ ಗುಂಪು ಗುಂಪೇ ಬರುತಿತ್ತು. ಅವರ ಮಧ್ಯೆ, ಅಷ್ಟರಲ್ಲೇ ಸ್ವಲ್ಪ ಜೋರಿಯಾಗಿ ಆ ರಾಷ್ಟ್ರದ, ರಾಜಧಾನಿಯ, ಮೆಚ್ಚಿನ, ನೆಚ್ಚಿನ ಸಾಹಿತಿ ನಿಧಾನವಾಗಿ ನಡೆದು ಬರುತ್ತಿದ್ದ.

"ಲೋ! ಅವ್ರೇ ಕಾಣೋ .......ಅವತ್ತು ನಾವೆಲ್ಲಾ ಹೇಳ್ತಾ ಇದ್ದುದ್ದು ಪ್ರಚಂಡ ಸಾಹಿತಿ ಅಂತ" ಎಂದು ಸಾಹಿತಿಯನ್ನು ಸೂಚಿಸುತ್ತಾ ಒಬ್ಬ ತರುಣ ವಿದ್ಯಾರ್ಥಿ ಒಬ್ಬ ಪುಟ್ಟ ಹುಡುಗನ ತಲೆಯ ಮೇಲೆ ಹೊಡೆದು ಹೇಳಿದ

"ತಲೇ ಮೇಲೆ ಯಾಕೋ ಹೊಡೀತೀ ಅವ್ರನ್ನ ತೋರ್ಸೋಕೆ" ಎಂದ ಆ ಪುಟ್ಟ ಹುಡುಗ ತಲೆ ಕೆರೆದು ಕೊಳ್ಳುತ್ತಾ.

"ಅಂಥಾ ಮಹಾ ವ್ಯಕ್ತೀನ್ನೋಡೋದೇನು ಅಷ್ಟು ಸುಲುಭ್ವೇನೋ ಲೋ........ಇನ್ನೂ ಮೊದಳ್ಮೇಲೆ ನಾಲಕ್ಕೊಟ್ಟು ಹೇಳ್ಬೇಕಾಗಿತ್ತು" ಎಂದ ಇನ್ನೊಬ್ಬ ಧಾಂಡಿಗ ವಿದ್ಯಾರ್ಥಿ ಆ ಪುಟ್ಟ ಹುಡುಗನ ಕಿವಿ ಹಿಂಡುತ್ತಾ.

ಆ ಪುಟ್ಟ ಹುಡುಗ ನಗುವಿನಿಂದ ಗಡ್ಡದ ಮೇಲೆ ಕೈ ಇಟ್ಟು ಕೊಂಡು "ಹಾಗಾದ್ರೆ ಮೊದಳ್ಸರ್ಯಾಗಿಲ್ದೇ ಇರೋರ್ಕಣ್ಣಿಗೆ ಮಾತ್ರ ಆ ನಿಮ್ಮ ಸಾಹಿತಿ ಪ್ರಚಂಡನೇನೋ!" ಎಂದವನೆ ಕಿಲಕಿಲ ನಗುತ್ತಾ ಧಾಂಡಿಗರು ಹೊಡೆದಾರೆಂಬ ಭಯದಿಂದ ಹಾವಿನಂತೆ ಸರಸರ ಓಡಿ ಹೋದ. ಸ್ವಲ್ಪಹೊತ್ತಿನಲ್ಲೇ ಗೂಂಡನಿಗಿಂತಲೂ ಮುಂದೆ ಓಡಿ ಮುದುಕರ ಗುಂಪಿನಲ್ಲಿ ಮರೆಯಾದ.

"ಮೊನ್ನೆ ಕೇಳಿದ್ರಾ ಅವ್ರ ಭಾಷಣಾನಾ.......ನಮ್ಸಂಘದಲ್ಲಿ ಆಯ್ತಲ್ಲಾ....ಆಹಾ! ಏನ್ಜೋರಾಗಿತ್ರೀ ಸುಮ್ನೆ... ಆರಂಭ ಮಾಡಿದ್ದು, ಮುಗ್ಸಿದ್ದು ಎರಡೇನಲ್ರೀ ಗೊತ್ತಾಗಿದ್ದು" ಎಂದ ಒಬ್ಬ ವಿದ್ಯಾರ್ಥಿ ಇನ್ನೊಬ್ಬನನ್ನು ಕುರಿತು.

"ಅಲ್ವೇ ಮತ್ತೆ....ಭಾಷೇಲಿ ಅಷ್ಟು ಹಿಡಿತ, ಪಾಂಡಿತ್ಯ....ನಾನು ಅವ್ರ ಉಪನ್ಯಾಸ ಮಾಡೋದು ಯಾವಾಗ ನಿಲ್ಲಸ್ತಾರೊ ಏನೊ ಅಂತ ಕಾದಿದ್ದೆ....ಮುಗ್ಸಿದ ತಕ್ಷಣಾನೇ ಅವ್ರ ಹತ್ತಿರ ದಬಾಯಿಸ್ಕೊಂಡ್ಹೋಗಿ ದ್ದೆನೂ, ನೋಡಿ....ಇದ್ರಲ್ಲಿ ಅವ್ರ 'ಆಟೋಗ್ರಾಫ್' ತೊಗೊಂಡೆ.... ಒಳ್ಳೇ ವಿಶಾಲ ಹೃದಯಾನ್ರೀ ಅವ್ರುದೂನೂ....ಅದೆಷ್ಟು ಜನ ಅಂತೀರಿ ಸುಮ್ನೆ....ಸಾವಿರಾರು ಜನಕ್ಕೆ ಬೇಜಾರ್ಮಾಡ್ಕೊಳ್ದೆ 'ಆಟೋಗ್ರಾಫ್' ಕೊಟ್ರು" ಎನ್ನುತ್ತಾ ಇನ್ನೊಬ್ಬ ವಿದ್ಯಾರ್ಥಿ ಕಿಸೆಯಿಂದ ಒಂದು ಪುಸ್ತಕ ವನ್ನು ತೆಗೆದು ತೋರಿಸಿದ.

"ಒಳ್ಳೇ ಪಂಡಿತರು, ಜ್ಞಾನಿಗಳು........ಅಷ್ಟಲ್ಲದೇನೇ ಎಲ್ಲಾ ಹೇಳ್ತಾರೇ ಮತ್ತೆ" ಎಂದ, ಮಾತನ್ನು ಆರಂಭಿಸಿದ್ದ ವಿದ್ಯಾರ್ಥಿ. ಇಷ್ಟು ಹೊತ್ತಿಗೆ ಆ ಪುಟ್ಟ ಹುಡುಗ ಹೇಗೋ ಯಾರಿಗೂ ಕಾಣದೆ ಇಲ್ಲಿಗೆ ಪುನಃ ಬಂದುಬಿಟ್ಟಿದ್ದ.

"ಹಾಗಾದ್ರೆ ನಿಮ್ಮ ಸಾಹಿತಿ ಪಟಾಕಿ ಶಬ್ದ ಮಾಡ್ದಾಂಗೆ ಬರೇ ಆರ್ಭಟ ಅನ್ನಿ. ಅವ್ರಾಡೋ ಮಾತು ನಿಮ್ಗೇನು ಅರ್ಥವೇ ಆಗೋ ದಿಲ್ವೇ....ಬರೀ ಅನರ್ಥಾ...." ಎಂದು ಕಿಲಕಿಲ ನಗುತ್ತಾ ಆ ಪುಟ್ಟ ಹುಡುಗ ದೊಡ್ಡ ವಿದ್ಯಾರ್ಥಿಗಳು ಹೊಡೆದು ಬಿಡುವರೆಂದು ಹೆದರಿ

ಚಂಗನೆ ಹಾರುತ್ತಾ ಪುನಃ ಓಡುತ್ತ ಹೊರಟುಬಿಟ್ಟ.

"ನಿಂತ್ಕೋಳೋ ಲೋ ಪಿಲ್ಟು, ಒಂದ್ಮೈಣಸಿನ್ಕಾಯಷ್ಟು ಉದ್ದಾ ಇಲ್ಲ....ತಲ್ಯೆಲ್ಲಾ ಹರ್ಟೆ ಹೊಡೀತಾನೆ....ಅವ್ರ ವಿಷಯ್ವಾಗಿ ಮಾತ್ನಾಡೋ ಯೋಗ್ಯತೆಯಾದ್ರೂ ಇದ್ಯೇ ನಿಂಗೆ?" ಎಂದ ಮತ್ತೊಬ್ಬ ಸಾಹಿತಿ ಆಗಬೇಕೆಂದು ಹಂಬಲಿಸುತ್ತಿದ್ದ ತರುಣ. ಅವನು ಆಗತಾನೆ ತನ್ನ ಮೊದಲನೆಯ ಕಥಾಸಂಕಲನವನ್ನು ತಯಾರುಮಾಡಿ ಆ ಹಿರಿಯ ಹಾಗೂ ಜನಮೆಚ್ಚಿನ ತರುಣ ಸಾಹಿತಿಯನ್ನು ಮುನ್ನುಡಿ ಬೇಡುವುದ ಕ್ಕೋಸ್ಕರ ನೋಡಬೇಕೆಂದು ಮಾಡಿದ್ದ.

ಎಲ್ಲರೂ ಆ ಸಾಹಿತಿಯನ್ನೇ ಉತ್ಸಾಹದಿಂದ, ಗೌರವದಿಂದ ನೋಡುತ್ತಿದ್ದುದು ಆ ಹಿರಿಯ ಸಾಹಿತಿಗೆ ಗೊತ್ತಾದರೂ ತಿಳಿಯದಂತೆ ಅವನು ಮೂಗು ಕುಣಿಸುತ್ತಾ, ಮುಖವನ್ನು ಗಂಟಿಕ್ಕುತ್ತಾ, ಏನೋ ದೊಡ್ಡ ಸಮಸ್ಯೆಯನ್ನು ವಿಚಾರಮಾಡುತ್ತಿರುವಂತೆ ಕಾಣಿಸುಕೊಳ್ಳುತ್ತಾ ನಿಧಾನವಾಗಿ ನಡೆಯುತ್ತಿದ್ದ. "ನೋಡ್ರಿ, ಅವ್ರು ಎಷ್ಟು ಯೋಚ್ನೆ ಮಾಡ್ತಾ ಹೋಗ್ತಿದ್ದಾರೆ....ನಮ್ಗೇ ಈ ಮಕ್ಕಳ್ನ ಕೊಲ್ಲೋರ್ವಿಷಯ್ದಲ್ಲಿ ಹಾಗನ್ನಿಸ್ಬೇಕಾದ್ರೆ ಇನ್ನು ಕವಿ ಹೃದಯ ಇರೋ ಅವ್ರನ್ನ ಕೇಳ್ಬೇಕೇ" ಎಂದು ಒಬ್ಬ ವಿದ್ಯಾರ್ಥಿ ಸಾಹಿತೀನೇ ಬಾಯ್ಬಾಯ್ಬಿಟ್ಕೊಂಡು ನೋಡ್ತಾ ರಾಗ ಎಳೆದ.

ವಿದ್ಯಾರ್ಥಿಗಳ ಗುಂಪಿನ ಹಿಂದುಗಡೆಯೆ ಸಣ್ಣಾಪುಟ್ಟಾ ಹುಡುಗ್ರೂ ಮತ್ತು ಕೆಲವು ಪುರಪ್ರಮುಖರೂ ಬರ್‍ತಾ ಇದ್ರು. ಅವರ ಮಧ್ಯೆ ರಾಷ್ಟ್ರದ ಪ್ರಗತಿಪಕ್ಷದ ರಾಜಕೀಯ ತರುಣ ಮುಖಂಡರೊಬ್ಬರು ಪತ್ನೀ ಸಮೇತರಾಗಿ ನಡೆದು ಬರುತ್ತಿದ್ದರು. ಹುಡುಗರು ಅವರನ್ನು ನೋಡಿ ದೊಡನೆಯೇ "ನ್ಯಾಯ ಚಿರಾಯುವಾಗಲಿ........ನ್ಯಾಯ ಚಿರಾಯು ವಾಗಲಿ" ಎಂದು ಘೋಷಣೆ ಮಾಡಿದರು. ತರುಣ ಮುಖಂಡರು ಅದನ್ನು ಕೇಳಿದೊಡನೆಯೆ ನಾಲ್ಕೂ ಕಡೆಗೂ ತಿರುಗಿ ಮುಂದಿಗೆ ಗತ್ತಿ ನಿಂದ, ಠೀವಿಯಿಂದ ನಮಸ್ಕರಿಸಿ ಘೋಷಣೆ ಸ್ವೀಕಾರ ಮಾಡಿದರು. ಒಡನೆಯೆ ಹುಡುಗರೆಲ್ಲಾ ಮುಖಂಡರಿಗೆ ಹಲವು ಬಾರಿ ಜೈಕಾರವನ್ನು

ಮಾಡಿ " ಇಕ್‍ಕಿಲಾಬ್ ಜಿಂದಾಬಾದ್" ಎಂದು ಕಡೆಗೆ ಕೂಗಿದರು.

ಆ ತರುಣ ಮುಖಂಡರು ಸ್ವಾತಂತ್ರ್ಯ ಬರುವುವಕ್ಕೆ ಮುಂಚೆ ಧರಿಸುತ್ತಿದ್ದ ಉಡುಪು ದೀಕ್ಷೆಯನ್ನೇ ಈಗಲೂ ಅನುಸರಿಸಿಕೊಂಡು ಬಂದಿದ್ದರು. ಮುಂದಿನ ಚುನಾವಣೆಯಲ್ಲಿ ಅವರು ಮಂತ್ರಿಗಳಾಗುವ ನಿರೀಕ್ಷಣೆಯೂ ಇತ್ತು. ಅವರ ಪತ್ನಿ ರಾಷ್ಟ್ರದ ಇತ್ತೀಚಿನ ಸೊಗಸಿನ ಅಳತೆಯನ್ನು ಅನುಸರಿಸಿ ಉಡಿಗೆ ತೊಡಿಗೆ ತೊಟ್ಟಿದ್ದರು. ದಂಪತಿಗಳು ತಮ್ಮ ತಮ್ಮಲ್ಲಿ ಪಿಸುಮಾತನಾಡಿಕೊಳ್ಳುತ್ತಾ ನಡೆಯುತ್ತಿದ್ದರು. ಇದ್ದಕ್ಕಿದ್ದಂತೆ ಹಿಂದಿನಿಂದ ಗಂಡ ಹೆಂಡರಿಬ್ಬರು ಒಬ್ಬರ ಕೈಯಲ್ಲೊಬ್ಬರನ್ನು ಹಿಡಿದು ಆತುರದಿಂದ ಅವರನ್ನು ಹಾದುಕೊಂಡು ಹೋದರು.

ತರುಣ ಮುಖಂಡರ ಪತ್ನಿ ಹಾದುಹೋದ ಗಂಡಸನ್ನು ನೋಡುತ್ತಲೆ ಅವನಕಡೆ ಬೆರಳುಮಾಡಿ ತನ್ನ ಪತಿಗೆ ಹೇಳತೊಡಗಿದಳು: "ನೋಡೀ ಅಂದ್ರೆ........ಅವ್ರನ್ನೇ ನಾನು ವಿಚ್ಛೇದನ ಮಾಡಿ ನಿಮ್ಮನ್ನು ವಿವಾಹವಾದದ್ದು. ಅವ್ರಲ್ಲಿ ಎಲ್ಲಾ ಸರ್ಯೇ........ಸಂಪಾದ್ನೆ ನಿಮ್ಗಿಂತ್ಲೂ ಚೆನ್ನಾಗೇ ಇತ್ತು........ಒಳ್ಳೇ ರೂಪಾನೂ ಇತ್ತು......ಆದ್ರೆ ನನ್ಗೂ ಅವ್ರಿಗೂ " ವಿವಾಹ ವಿಚ್ಛೇದನ "ದ ವಿಷಯವಾಗಿ ದೀರ್ಘವಾದ ಚರ್ಚೆ ನಡೀತಾ ಇತ್ತು. ಅವ್ರು " ಅದು ಕೂಡದು " ಅಂತ. ನಾನು ಅದಿಲ್ಲದೆ ಪ್ರಗತಿ ಇಲ್ಲಾಂತ. ಕಡೆಗೆ ಚರ್ಚೆ ವಿಪರೀತ್ಕಾಗಿ ನಾನು " ವಿಚ್ಛೇದನ "ಕ್ಕೇ ಅರ್ಜಿ ಹಾಕ್ಬಿಟ್ಟೆ."

"ಅಯ್ಯೋ ಚಿನ್ನಾ, ಒಳ್ಳೇ ಆಶ್ಚರ್ಯವಾಗಿದ್ಯಲ್ಲಾ ಇದು!" ಎಂದು ತರುಣ ಮುಖಂಡ ಹಾದು ಹೋದ ಹೆಂಗಸಿನಕಡೆ ಬೆರಳು ಮಾಡುತ್ತಾ ತನ್ನ ಪತ್ನಿಗೆ ಹೇಳಿದ: "ನಾನು ಅವ್ಳನ್ನ ವಿಚ್ಛೇದನ ಮಾಡೇ ನಿನ್ನನ್ನು ಮದುವೆಯಾದದ್ದು. ....ಛೆ!........ನೀನು ವಿಚ್ಛೇದನಮಾಡಿದ ಅವ್ನು, ನಾನ್ಮಾಡಿದ ಅವ್ಳು........ಇವ್ರಿಬ್ರೇ ಸೇರ್ಬೇಕೇ ಒಟ್ಗೆ!........ಅವ್ಳು ಎಲ್ಲಾ ವಿಷಯ್ದಲ್ಲೂ ಭರ್ಜರಿಯಾಗೇ ಇದ್ಳು........ನಿನ್ಗಿಂತ ಚೆನ್ನಾಗೇ ಇದ್ಳು........ಗುಣವೂ ಬಹಳ ಒಳ್ಳೇದೇ........ಆದ್ರೆ, ಚಿನ್ನ, ರಾತ್ರೀಹೊತ್ತು ಸುಮ್ನೆ ನಾಲ್ಕೈದ್ಸಲ ಸೀನೋಳು........ಅದ್ರ

ಮೇಲೆ ಅವ್ಳನ್ನ ವಿಚ್ಛೇದನ ಮಾಡ್ಬಿಟ್ಟೆ."

ಈ ರೀತಿ ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಂಡ ಮೇಲಂತೂ ಅವರಿಬ್ಬರಲ್ಲಿ ಎಂದಿಗಿಂತಲೂ ಹೆಚ್ಚಾಗಿ ಪ್ರೇಮ ಉಕ್ಕಿತು. ಹೆಂಡತಿಯ ಕೈಗಳ ಜೊತೆ ತನ್ನ ಕೈಗಳನ್ನು ಹೊಸೆಯುತ್ತಾ ತರುಣ ಮುಖಂಡರು ಮುಂದೆ ಮುಂದೆ ನಡೆದರು. ದೊಡ್ಡ ಚೌಕ ಇನ್ನೇನು ಸಮಾಪಿಸುತ್ತಿತ್ತು.

೪

ನ್ಯಾಯಾಸ್ಥಾನವನ್ನು ಸೇರುವ ಎಲ್ಲ ರಸ್ತೆಗಳೂ ಮುಂಗಡವಾಗಿ ಆ ದೊಡ್ಡ ಚೌಕದಲ್ಲಿ ಸಂಧಿಸುತ್ತಿದ್ದುವು. ದೊಡ್ಡ ಚೌಕ ನ್ಯಾಯಾ ಸ್ಥಾನಕ್ಕೆ ಸುಮಾರು ಎರಡು ಫರ್ಲಾಂಗ್ ಮುಂದೆ ಇತ್ತು. ನ್ಯಾಯಾ ಸ್ಥಾನದ ಹಿಂದಿದ್ದ ರಸ್ತೆಗಳೂ ಈ ಚೌಕವನ್ನೇ ಬಳಸಿಕೊಂಡು ಬಂದು ಸೇರುತ್ತಿದ್ದುವು ಚೌಕದ ಒಂದು ಪಕ್ಕದಲ್ಲಿ ಸಹಸ್ರಾರು ವಿವಿಧ ವಾಹನ ಗಳನ್ನು ನಿರಾತಂಕವಾಗಿ ಇಡಬಹುದಾಗಿತ್ತು. ಸೈಕಲ್ಲು, ಕಾರು, ಮೋಟಾರ್ ಸೈಕಲ್ಲು, ಗಾಡಿ, ಇತ್ಯಾದಿ ವಾಹನಗಳನ್ನೆಲ್ಲಾ ಅಲ್ಲಿಯೇ ಬಿಟ್ಟು ಎಲ್ಲರೂ ನ್ಯಾಯಾಸ್ಥಾನದ ವರೆವಿಗೆ ನಡೆದೇ ಹೋಗಬೇಕೆಂಬು ಅಲ್ಲಿ ಕಾನೂನು. ದೊಡ್ಡ ಚೌಕದಿಂದ ನ್ಯಾಯಾಸ್ಥಾನಕ್ಕೆ ಎರಡು ಕವಲು ರಸ್ತೆಗಳು. ಒಂದು ರಸ್ತೆಯಲ್ಲಿ ಹೆಂಗಸರು ಮಾತ್ರ ನಡೆದು ನ್ಯಾಯಾಸ್ಥಾನದ ಎಡಭಾಗವಲ್ಲಿದ್ದ "ಹೆಂಗಸರ ಗ್ಯಾಲರಿ"ಗೆ ಹೋಗ ಬೇಕೆಂದು ಅಲ್ಲಿನ ನಿಯಮ. ಇನ್ನೊಂದು ರಸ್ತೆಯಲ್ಲಿ ಗಂಡಸರು ಮಾತ್ರ ನಡೆದು ನ್ಯಾಯಾಸ್ಥಾನದ ಬಲಭಾಗದಲ್ಲಿದ್ದ 'ಗಂಡಸರ ಗ್ಯಾಲರಿ'ಗೆ ಹೋಗಬೇಕಾಗಿತ್ತು. ಆದ್ದರಿಂದಲೇ ಅಲ್ಲಿನ ಜನರು ಒಂದು ರಸ್ತೆ ಯನ್ನು "ಹೆಂಗಸರ ರಸ್ತೆ" ಎಂದೂ ಇನ್ನೊಂದನ್ನು "ಗಂಡಸರ ರಸ್ತೆ" ಎಂದೂ ಕರೆಯುವುದು ಅಲ್ಲಿ ವಾಡಿಕೆಯಾಗಿತ್ತು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮುಂದಾಳುಗಳಾಗಿ ತನುಮನಧನ ವೆಲ್ಲವನ್ನೂ ಸಮರ್ಪಣೆ ಮಾಡಿ ದುಡಿದಿದ್ದ ಹಿರಿಯ ನಾಯಕರೊಬ್ಬರು

ಮಾಡಿದ ನಿಯಮ ಇದು. ಅವರು ಆಜನ್ಮ ಬ್ರಹ್ಮಚಾರಿಗಳು, ಅಲ್ಲದೆ ಬ್ರಹ್ಮಚರ್ಯಕ್ಕೂ ರಾಷ್ಟ್ರದ ಏಳಿಗೆಗೂ ನಿಕಟ ಸಂಬಂಧವಿದೆ ಎಂದು ಶುದ್ಧ ಭಾವದಿಂದ ನಂಬಿದ್ದರು. ಜನರ ಸರ್ಕಾರ ಬಂದೊಡನೆಯೇ ಜನರೆಲ್ಲ ಸೇರಿ ಅವರನ್ನೇ ಪ್ರಧಾನಿಗಳನ್ನಾಗಿ ಚುನಾಯಿಸಿದ್ದರು ಅವರು ಸೂಚಿಸಿದ ಅಭಿಪ್ರಾಯಗಳಿಗೆಲ್ಲಾ "ನ್ಯಾಯ ಚಿರಾಯು ವಾಗಲಿ", "ಇನ್‌ಕಿಲಾಬ್ ಜಿಂದಾಬಾದ್" ಇತ್ಯಾದಿ ಘೋಷಣೆ ಗಳಿಂದ ಮಾನವಕೋಟಿ ತನ್ನ ಸಮ್ಮತಿ ಇತ್ತಿತ್ತು. ಈಗ ಪ್ರಧಾನಿ ಗಳು ಬದಲಾಗಿದ್ದರು. ಆದರೂ ಅವರು ಆಗ ಮಾಡಿದ್ದ ಈ "ಹೆಂಗ ಸರ ರಸ್ತೆ, ಗಂಡಸರ ರಸ್ತೆ—ಕಾನೂನು" ಇನ್ನೂ ಅನೇಕ ಕಾನೂನುಗಳ ಜೊತೆಗೆ ಇದುವರೆವಿಗೂ ಉಳಿದು ಬಂದಿತ್ತು. ಮತ್ತು ನೂತನ ಮಂತ್ರಿ ಮಂಡಲ ಅದರ ಗೋಜಿಗೆ ಹೋಗಲೂ ಇಲ್ಲ.

* * * *

ನ್ಯಾಯಾಸ್ಥಾನದ ಹಿಂದಿನಿಂದ ಬರುತ್ತಿದ್ದ ರಸ್ತೆಯೊಂದರಲ್ಲಿ ಸನಾತನ ಧರ್ಮ ಸಂಘದ ಪ್ರಚಂಡ ಕಾರ್ಯದರ್ಶಿಗಳು ಒಳ್ಳೇ ಥಳಥಳಿಸುತ್ತಿದ್ದ ಜರತಾರಿ ಮುಗುಟ ಉಟ್ಟು ನಡೆದು ಬರುತ್ತಿದ್ದರು. ಅವರ ಜೊತೆಗೆ ಅವರ ಅವಿಚ್ಛಿನ್ನ ಭಕ್ತ, ಮುನಿಯ, ಕಂಡಹಾಗೆ ಸ್ವಲ್ಪ ದೂರವಿದ್ದು ಕೊಂಡು ನಡೆದು ಬರುತ್ತಿದ್ದ.

"ನೋಡೋಪ್ಪಾ ಮುನಿಯ, ಇಲ್ಲಿಂದ ನ್ಯಾಯಾಸ್ಥಾನಕ್ಕೆ ನಾಲ್ಕು ಹೆಜ್ಜೆ ಇಟ್ರೆ ಪೂರೈಸ್ಹೋಯ್ತು....ಸಿಕ್ಕೋಗುತ್ತೆ....ಆದ್ರೆ ಹಾಗ್ಹೋಗ ಕ್ಕಾಗ್ದಲ್ಲೋಪ್ಪಾ....ಇಲ್ಲಿಂದ ಮುಂದ್ಹೋಗಿ ಆ ಚೌಕ ಮುಟ್ಟಿ ಅಲ್ಲಿಂದ ಗಂಡಸ್ರ ರಸ್ತೇಲಿ ನ್ಯಾಯಾಸ್ಥಾನಕ್ಕೆ ಅನ್ಯಾಯ್ವಾಗಿ ಬಳಸ್ಕೊಂಡ್ಹೋಗ್ಬೇಕಲ್ಲೋ....ಇದು ಕರ್ಮವಲ್ದೇ ಇನ್ನೇನೋಪ್ಪಾ ಮುನಿಯಾ!" ಎಂದು ಸನಾತನಿಗಳು ಠೀವಿಯಿಂದ ಅಪ್ಪಣೆ ಕೊಡಿಸಿದರು. "ಅಲ್ಲವ್ರಾ ನನ್ನೊಡ್ಯಾ" ಎಂದು ಮುನಿಯ ಅವರ ಮಾತಿಗೆ ತಾಳ ಬಡೆದ. ಅನಂತರ ಸನಾತನಿಗಳು ಕರ್ಮಯೋಗದ ವಿಷಯವಾಗಿ ಒಂದು ಪರಿಚಯದ ಉಪನ್ಯಾಸಕ್ಕೇ ಷುರು ಮಾಡ್ಬಿಟ್ರು. ಅವರು ಹೇಳುತ್ತಿದ್ದ

ರೀತಿ, ಅದನ್ನ ಹೇಳೋಕ್ಕೆ ಅವ್ರು ಅನುಸರಿಸಿದ ನೀತಿ, ಇವನ್ನೆಲ್ಲಾ ನೋಡಿದ್ರೆ ಅವರೇ ಖುದ್ದಾಗಿ 'ಭಗವದ್ಗೀತೆ'ನ ಆಗತಾನೆ ಸೃಷ್ಟಿ ಮಾಡ್ತಿದಾರೊ ಏನೊ ಅನ್ನೋಹಾಗಿತ್ತು. ಅವರ ಉಪನ್ಯಾಸಕ್ಕೆ ಆಗಾಗ್ಯೆ, ಮೇಲಿಂದಮೇಲೆ "ಅಲ್ಲವ್ರಾ ನನ್ನೊಡ್ಯಾ" ಎನ್ನುತ್ತಾ ಮುನಿಯ ಅರ್ಧವಿರಾಮ, ಪೂರ್ಣವಿರಾಮ, ಇತ್ಯಾದಿಗಳನ್ನ ತಗಲಸ್ತಾ ಇದ್ದ.

ಏತನ್ಮಧ್ಯೆ ರಾಷ್ಟ್ರದ ಕ್ರಾಂತಿ ಪಕ್ಷದ ವೀರ ನಾಯಕ ತನ್ನ ಚೇಲರ ಗುಂಪಿನೊಡನೆ ಸನಾತನಿಗಳನ್ನು ಹಾದು ಹೋದ. "ಈ ವಂಶ ವಂಶಾನೇ ಬೇರು ಸಹಿತ ಕಿತ್ತು ನಿರ್ಮೂಲ ಮಾಡ್ಬಿಡ್ಬೇಕು" ಎಂದು ಆ ವೀರ ನಾಯಕ ಸನಾತನಿಗಳಿಗೂ ಕೇಳಬೇಕೆಂದೇ ಜೋರಾಗಿ ಸಿಂಹನಾದ ಮಾಡಿದ. ಚೇಲರೆಲ್ಲಾ ತಮ್ಮ ಮುಖಂಡನ ನೇತೃತ್ವದಲ್ಲಿ ನಾಯಕನಿಗೆ ಹಲವು ಬಾರಿ ಜೈಕಾರವನ್ನು ಮಾಡಿ ಕಡೆಗೆ "ಇಂಕಿಲಾಬ್ ಜಿಂದಾಬಾದ್" ಎಂದು ಬೇಗ ಬೇಗ ಮುಂದೆ ಸರಿದರು. ಇದೊಂದೂ ಅರ್ಥವಾಗದೆ ಮುನಿಯ ಅವಾಕ್ಕಾಗಿ ಅವನ ಏಕಮಾತ್ರ ಜ್ಞಾನಭಂಡಾರದಂತಿದ್ದ ಗುರುಗಳನ್ನು ಪ್ರಶ್ನೆಮಾಡಿದ:

"ಇದ್ಯೇನು ನನ್ನೊಡ್ಯಾ....ಬೀದೀಲೆಲ್ಲಾ ಇವ್ರು ಇಷ್ಟು ಮುಂದು ವರೀತಾರಲ್ಲಾ, ಇದು ನ್ಯಾಯವೆ?"

ಸನಾತನಿಗಳು ಅವನು ಕೇಳಿದ್ದೇ ತಡ ಉತ್ತರ ಪೋಣಿಸ್ಬಿಟ್ರು: "ಅದೇ ಹೇಳ್ತಿದ್ನಲ್ಲೋಪ್ಪಾ ಮುನಿಯ, ಕರ್ಮಯೋಗದ ವಿಷ್ಯ.... ನಾನು (ಹೃದಯವನ್ನು ಹೊರಚಿಮ್ಮಿಸುತ್ತಾ) ಹಾಗನ್ನಸ್ಕೊಳ್ಬೇಕಾಗ್ಬಂದದ್ದು, ಅವ್ರು ಹಾಗಂದಿದ್ದು, ಇದೆಲ್ಲಾ, ಮುನಿಯ್ಯಾ!...., ನನ್ನ ಕರ್ಮಕ್ಕೆ ಸೇರಿದುದು....ಅದರ ವಿಷಯವಾಗಿ ನೀನು ವೃಥಾ ಚಿಂತಿಸ್ಬೇಡಪ್ಪಾ" ಎಂದಿದ್ದೂನೂ ಪುನಃ ಸನಾತನಿಗಳು ಕರ್ಮಯೋಗದ ವಿಷಯವಾಗಿ ಉಪನ್ಯಾಸವನ್ನು ಮುಂದುವರಿಸಿದರು.



ದೊಡ್ಡ ಚೌಕ ಮುಟ್ಟುವ ಹೊತ್ತಿಗೆ ಸನಾತನಿಗಳೂ ಒಂದು ರೀತಿ

ಯಲ್ಲಿ ತಮ್ಮ ಉಪನ್ಯಾಸವನ್ನು ಕೊನೆ ಮುಟ್ಟಿಸಿದ್ದರು. ಮುದುಕರ ಗುಂಪು ಆಗಲೇ ದೊಡ್ಡ ಚೌಕವನ್ನು ಬಿಟ್ಟು ನ್ಯಾಯಾಸ್ಥಾನವನ್ನು ಸೇರಿತ್ತು.

ಗೂಂಡ ದೊಡ್ಡ ಚೌಕ ಸೇರಿದ ತಕ್ಷಣ ಹೆಂಗಸರ ರಸ್ತೇಲಿ ಕಾಲಿಟ್ಟು ತನಗಿದ್ದ ನಾಲ್ಕನೆಯ ಅವಕಾಶದ ಹಕ್ಕನ್ನು ಚಲಾಯ್ಸಿ ಬಿಡೋಣ ಅಂತ ಇನ್ನೇನು ನಿರ್ಧರಿಸುವುದರಲ್ಲಿದ್ದ. ಆದರೆ "ನ್ಯಾಯಾಸ್ಥಾನದಲ್ಲಿ ಏನ್ನಡ್ಯತ್ತ್ಯೋ ಏನೋ ನೋಡೇ ಬಿಡೋಣ" ಎನ್ನುವ ಉತ್ಸುಕತೆಯಿಂದ ಗಂಡಸರ ರಸ್ತೇಲೇ ತಲೆ ತಗ್ಗಿಸಿಕೊಂಡು ಹೊರಟ.

ಸಾಹಿತಿ ದೊಡ್ಡ ಚೌಕ ಸೇರತ್ಲೂ ನಾನಾ ರಸ್ತೆಗಳಿಂದ ಬಂದ ಜನರೆಲ್ಲಾ ಅವನನ್ನು ಭಯಭಕ್ತಿಯಿಂದ ನೋಡುತ್ತಿದ್ದರು. ಸಾಹಿತಿ ಮಾತ್ರ ತನ್ನ ಮುಖವನ್ನು ಮತ್ತಷ್ಟು ಗಂಟಿಕ್ಕಿದ. ಕೈಗಳನ್ನು ಸೊಂಟದ ಮೇಲಿಟ್ಟುಕೊಂಡು ಸ್ವಲ್ಪ ದೂರ ನಡೆದ; ಅನಂತರ ಸರಿ ಹೋಗದೆ ಹಿಂದಕ್ಕೆ ಕಟ್ಟಿದ. ಕಡೆಗೆ, ಅದೂ ಸರಿಹೋಗದೆ, ಕೈಗಳನ್ನು ಎಲ್ಲಿಡಲೂ ತೋಚದೆ, ಇತ್ತಿಂದತ್ತ ಗಾಳಿಯಲ್ಲಿ ಆಡಿಸುತ್ತಾ, ಸೊಟ್ಟ ನಡಿಗೆಗಳನ್ನು ಹಾಕುತ್ತಾ ಬೇಗ ಬೇಗ ಹೊರಟುಬಿಟ್ಟ.

ತರುಣ ಮುಖಂಡರು ದೊಡ್ಡ ಚೌಕವನ್ನು ಮುಟ್ಟುತ್ತಲೆ ಪತ್ನಿಯಿಂದ ಅಗಲಬೇಕಲ್ಲಾ ಎಂದು ವಿರಹ ತಾಪದಿಂದ ಹೇಳಿದರು:— "ಚಿನ್ನಾ, ಮುಂದಿನ ಅಧಿವೇಶನ್ದಲ್ಲಾದ್ರೂ ಈ ನಿಯಮಾನ ನಾನು ಬದಲಾಯ್ಸಿ ಬಿಡ್ತೇನೆ. ಕಡೇಪಕ್ಷ ನ್ಯಾಯಾಸ್ಥಾನದವರ್ಗಾದ್ರೂ ಇಬ್ರೂ ಒಟ್ಗೆ ಹೋಗೋಹಾಗ್ಮಾಡ್ತೇನೆ. ಮುಂದಿನ ಅಧಿವೇಶನ್ದಲ್ಲಿ ಸಾಧ್ಯವಾಗ್ದೆ ಹೋದ್ರೆ ನಾನು ಮಂತ್ರಿಯಾದ್ಮೇಲಂತೂ ಮೊದಲು ಈ ಕೆಲ್ಸ ಮಾಡ್ಬಿಡ್ತೇನೆ." ಅವರ ಪತ್ನಿ ತಲೆ ತಗ್ಗಿಸಿಕೊಂಡು "ಏನೇ ಆಗ್ಲಿ, ಈ ಸಲ್ವಂತೂ ಬೇರ್ಬೇರೇನೇ ಹೋಗ್ಬೇಕಲ್ಲಾ"ಂತನ್ನೋ ಸಂತಾಪವನ್ನು ತನ್ನ ಮುಖಭಾವದಿಂದ ಸೂಕ್ಷ್ಮವಾಗಿ ಸೂಚಿಸಿದಳು. ತರುಣ ಮುಖಂಡರೂ ಮನಶ್ಶಾಸ್ತ್ರವನ್ನು ಸಾಕಷ್ಟು ವ್ಯಾಸಂಗ ಮಾಡಿದ್ದುದರಿಂದ ಅವರಿಗೆ ತಮ್ಮ ಪತ್ನಿಯ ಆಗಿನ ಚಿತ್ತವೃತ್ತಿ ಅರ್ಥವಾಗದಿರಲಿಲ್ಲ.

ಅಂತೂ ದೊಡ್ಡ ಚೌಕಾನೂ ಬಂದೇ ಬಂತು; ಗಂಡ ಹೆಂಡಿರು ಬೇರೆ ಬೇರೆ ಹಾದಿಯನ್ನು ಹಿಡಿದು ಹೊರಟಿದ್ದೂ ಆಯಿತು.

ದೊಡ್ಡ ಚೌಕ್ದಲ್ಲಿ ನಿಂತಿದ್ದ ಆ ಸಹಸ್ರಾರುಮೋಟಾರುಗಳ ವೈಖರಿಯೇ ವೈಖರಿ! ಅವು ಆ ಮಧ್ಯಾಹ್ನದಲ್ಲಿ ಥಳಥಳಿಸುತ್ತಾ ಅವನ್ನೇ ಕೆಟ್ಟ ಕಣ್ಣಿಂದ ದುರುಗುಟ್ಟಿಕೊಂಡು ನೋಡುತ್ತಿದ್ದವರ ಕಣ್ಣುಗಳನ್ನು ಚುಚ್ಚುತ್ತಿದ್ದವು.

೬

ನಾನಾ ರಸ್ತೆಗಳಿಂದ ಬಂದ ಜನರೆಲ್ಲಾ ನ್ಯಾಯಾಸ್ಥಾನವನ್ನು ಪ್ರವೇಶಿಸುತ್ತ ಬಂದರು. ಕಾರಿನಲ್ಲಿ ಬಂದವರು, ಸೈಕಲ್ಲಿನಮೇಲೆ ಬಂದವರು, ನಡೆದು ಬಂದವರು ಎಂಬ ಯಾವ ಭೇದಭಾವವೂ ಇಲ್ಲದೆ ಎಲ್ಲರೂ ನಡದೇ ಬಂದು ನ್ಯಾಯಾಸ್ಥಾನವನ್ನು ಸೇರುತ್ತಿದ್ದರು. ಗಂಡಸರು 'ಗಂಡಸರ ಗ್ಯಾಲರಿ'ಗೂ, ಹೆಂಗಸರು 'ಹೆಂಗಸರ ಗ್ಯಾಲರಿ'ಗೂ ಹೋಗಿ ತುಂಬುತ್ತಿದ್ದರು. ಸಹಸ್ರಾರು ಜನ ಒಟ್ಟಿಗೆ ಸೇರಿ ನ್ಯಾಯಾಸ್ಥಾನದ ಮೂಲೆ ಮೂಲೆಯಲ್ಲೂ ಕಲ್ಲೋಲಕಲ್ಲೋಲ ಎದ್ದಿತ್ತು. ಅಲ್ಲಲ್ಲೇ ಸಣ್ಣ ಸಣ್ಣ ಗಲಾಟೆಗಳು ಬೇರೆ. ಇವುಗಳ ಒಟ್ಟು ಪರಿಣಾಮವೆಂದರೆ ಹದ ಮೀರಿ ಘೋರ್ಗರೆಯುತ್ತಿದ್ದ ಕೋಲಾಹಲ.

ಯಾವ ಭೇದ ಭಾವವನ್ನೂ ತೋರದೆ ಸಕಲರನ್ನೂ ರಾಜಧಾನಿಯ ಮುಖ್ಯ ನ್ಯಾಯಾಸ್ಥಾನದೊಳಗೆ 'ವಿಚಾರಣೆ' ನಡೆಯುವ ದಿನಗಳಲ್ಲಿ ಬಿಡಬೇಕೆಂದು ಅಲ್ಲಿನ ಕಾನೂನು. ಆದರೆ ಅಷ್ಟರಲ್ಲೇ ಬಾಗಿಲಿನಲ್ಲಿ ನಿಂತಿದ್ದ ಪೋಲೀಸಿನವನು ತನ್ನ ಮಾತನ್ನೇ ಕಾನೂನೆಂದು ಭ್ರಮಿಸುವ ಮಂದಿಯನ್ನು ಹುಷಾರಾಗಿ ಜನರಿಂದ ಬೇರೆ ಮಾಡಿ ಅವರನ್ನು ಬಾಗಿಲಿನ ಹೊರಗಡೆಯೆ ತಡೆದು ನಿಲ್ಲಿಸಿ ಅವರನ್ನೆ ನೋಡತ್ತಾ ಕನ್ನಡಿಯಲ್ಲಿ ತನ್ನ ಚಿತ್ರವನ್ನೇ ನೋಡಿಕೊಂಡು ಹಿಗ್ಗುತ್ತಿರುವವನಂತೆ ಹಿಗ್ಗಿದ.

ಹಾಗೆ ಅವನು ತಡೆದು ನಿಲ್ಲಿಸಿದವರಲ್ಲಿ ಗೂಂಡನೂ ಸೇರಿಬಿಟ್ಟಿದ್ದ.

ಪ್ರಾಯಶಃ ಅವನ ಮೈಯನ್ನು ಅರೆಮುಚ್ಚಿದ್ದ ಚಿಂದಿ ಬಟ್ಟೆಯೇ ಇದಕ್ಕೆ ಕಾರಣ. ಪೋಲೀಸಿನವನ ಮೇಲೆ ಬಿದ್ದು 'ಆಗಿದ್ದಾಗಲಿ, ಒಳಗೆ ಹೋಗೇ ಬಿಡ್ಬೇಕು' ಅಂತ ಗೂಂಡ ಒಂದು ಸಲ ಯೋಚನೆ ಮಾಡಿದ. ಆದರೆ ಮರುಕ್ಷಣವೆ, 'ಇಷ್ಟು ಹೊತ್ತೇ ಕಾದಿದ್ದಾಯ್ತು, ಇನ್ನು ಸರ್ರ್ಯಾದ ಸಮಯಾನೇ ಉಪಯೋಗಿಸ್ಕೊಳ್ಳೋಣ' ಎಂದು ನಿರ್ಧರಿಸಿಕೊಂಡು ಪೋಲೀಸಿನವನ ಭೀತಿ ಸನ್ನೆಗೆ ಮನ್ನಣೆ ಕೊಟ್ಟ.

೭

ನ್ಯಾಯಾಧೀಶರು ಆಸನಾರೂಢರಾಗುವುದಕ್ಕೆ ಕಾಲು ಘಂಟೆ ಮುಂಚೆಯೇ ಜನರ ಮುಂದೆ ಅಪರಾಧಿಯನ್ನು ಹಾಜರು ಮಾಡು ವುದು ಅಲ್ಲಿನ ಸಂಪ್ರದಾಯ. ಅದರಂತೆ ಅಪರಾಧಿಯನ್ನು ಸಕಾಲದಲ್ಲಿ ಮರದ ಕಟ್ಟೆಕಟ್ಟೆಯೊಳಗೆ ತಂದು ನಿಲ್ಲಿಸಿದರು. ಅವನ ಎರಡು ಕೈಗಳನ್ನೂ ಬಲವಾದ ದಪ್ಪ ಸರಪಣಿಯಿಂದ ಬಿಗಿದಿದ್ದರು. ಆ ಸರಪಣಿ ಅದೇ ರಾಷ್ಟ್ರದ, ಪ್ರಪಂಚಕ್ಕೇ ಮೊದಲೆನಿಸಿದ್ದ ಕಬ್ಬಿಣದ ಕಾರ್ಖಾನೆ ಯಲ್ಲಿ ತಯಾರಿಸಿದ್ದಾಗಿತ್ತು. ಅಪರಾಧಿಯ ತೋಳುಗಳು ಆ ಸರಪಣಿಯ ಭಾರವನ್ನು ಹೊರಲಾರದೆ ಅವನ ಮುಖದ ಮೇಲೆ ನೋವಿನ ಮುದ್ರೆಯನ್ನು ಒತ್ತಿತ್ತು.

ಅಪರಾಧಿಯನ್ನು ನೋಡಿದೊಡನೆಯೆ ಜನರಲ್ಲಿ "ಗುಸ ಗುಸ ಪಿಸ ಪಿಸ" ಶುರು ಆಯಿತು. ಒಬ್ಬೊಬ್ಬರು ಒಂದೊಂದು ಮಾತನ್ನು ಆಡುತ್ತಿದ್ದುದರಿಂದ ಒಟ್ಟಿನಲ್ಲಿ ಹುಚ್ಚು ಗಲಾಟೆ ಮಾತ್ರ ಕೇಳಬರು ತ್ತಿತ್ತು. ಹೆಂಗಸರ ಗ್ಯಾಲರಿಯಲ್ಲಂತೂ ವಿಪರೀತ ಗದ್ದಲ. ಅವರು ಮಿತಿ ಮೀರಿ ಮಾತನಾಡುತ್ತಿದ್ದುದರಿಂದ ಅವರ ಕಂಠದ ಕೋಮಲತೆ, ಮಾಧುರ್ಯ, ಇಂಪು ಎಲ್ಲವೂ ಮಾಯವಾಗಿತ್ತು. ಅವರು ಮಾಡು ತ್ತಿದ್ದ ಗಲಾಟೆ ಅವರಿಗೆ ಅಷ್ಟೇನೂ ಗೌರವ ತರುವ ಹಾಗಿರಲಿಲ್ಲ; ಆದರೂ ಅವರೆಲ್ಲ ಕಲಿತವರಾಗಿದ್ದುದರಿಂದ ತಮ್ಮ ತಮ್ಮ ಹಕ್ಕು ಗಳನ್ನು ಯಾವ ಅಡ್ಡಿ ಆತಂಕವೂ ಇಲ್ಲದೆ ಉಪಯೋಗಿಸಿಕೊಳ್ಳುವ

ಚಿತ್ತಸ್ಥೈರ್ಯವನ್ನು ಅವರು ಸಾಧಿಸಿದ್ದರು.

* * * *

"ಹಯ್ಯೋ! ಈ ಚಂಡಾಲನ್ನ ಇಲ್ಲೀವರ್ಗೆ—ಈ ನ್ಯಾಯಾಸ್ಥಾನದ ವರ್ಗೆ ಬಿಡೋದೇ! ಮೊನ್ನೆ ಒಳ್ಳೆ ಹಗಲ್ನಲ್ಲೇ ಇಂಥಾ ಒಬ್ಬ ಚಂಡಾಲನ್ನ ಪೇಟೇಲಿ ನಾನೇ ಖುದ್ದಾಗಿ ಹೊಡೆದ್ಹಾಕ್ಬಿಟ್ನಲ್ಲಾ" ಎಂದು ಗಂಡಸರ ಗ್ಯಾಲರಿಯಲ್ಲಿ ಸ್ವಲ್ಪ ಮುಂದೆ ಕುಳಿತಿದ್ದ ಒಬ್ಬ ಗಂಡಸು ತನ್ನ ನೆರೆಯವನ ಕಡೆ ವಾಲಿ ಪಿಸುಮಾತಿನಲ್ಲಿ ಹೇಳಿದ. ತಕ್ಷಣವೆ ಅವನ ಮುಖವೆಲ್ಲಾ "ನ್ಯಾಯಾಧೀಶರು ಇಲ್ಲೇ ಹತ್ರ ಬಟ್ಟೆ ಬದ್ಲಾಯ್ಸಿ ನಿಂತ್ಕೊಂಡು ನನ್ಮಾತು ಕೇಳ್ಬಿಟ್ಟಿದ್ರೆ" ಎಂಬ ಶಂಕೆಯಿಂದ ಬಿಳುಪೇರಿತು: "ಅಯ್ಯೋ ಏನಪ್ಪಾ ಗತಿ! ಈ ದೇಶ್ದಲ್ಲಿ ಕಷ್ಟ .... ಒಂದ್ಮಾತಾಡ್ಬಿಟ್ರೆ ಸಾಕು....ಅದನ್ನೇ ಹಿಡ್ಕೊಂಡು ಶೂಲಕ್ಕೇ ಏರಿಸ್ಬಿಡ್ತಾರೆ" ಎಂದು ಅವನ ಮನಸ್ಸು ಕಳವಳಗೊಂಡು ತತ್ತರಿಸಿತು.

ಈ ಗಂಡಸು ಮಹಾಶಯ ಮದುವೆಯಾದಲಾಗಾಯ್ತು ತನ್ನ ಹೆಂಡತಿಯ ಆಳ್ವಿಕೆಯಲ್ಲಿ ವರ್ಷಾನುಗಟ್ಲೆ 'ಪೂರ್ಣ ಕರ್ಫ್ಯೂ' ಅನುಭವಿಸಿದ್ದ. ಅವನ ಅಪ್ಪಣೆ ಇಂದು ನ್ಯಾಯಾಸ್ಥಾನಕ್ಕೆ ಬಂದ ಒಂದು ನೆಪದಲ್ಲಿ ಈ ಆಪ್ಪಣೆ ಗಂಡನಿಗೂ ಬೆಳಕನ್ನು ನೋಡುವ ಒಂದು ಅವಕಾಶ ದೊರಕಿತ್ತು. ಅವನು ಗಂಡಸರ ಮುಖ ನೋಡೇ ಎಷ್ಟೋ ವರುಷಗಳಾಗ್ಹೋಗಿತ್ತು. ಇನ್ನು ಅವ್ರುಗ್ಳ ಜೊತೆ ಕಲೆತು, ಕೂತು, ಲೋಕಾರೂಢಿಯಾಗಿ ನಾಲ್ಕಾರು ಮಾತುಗಳನ್ನು ಆಡಿದ್ದಂತೂ ಒಂದು ಕನಸೇ ಆಗ್ಹೋಗಿತ್ತು. ಇವತ್ತು ಇದ್ದಕ್ಕಿದ್ದಂತೆ ಸಹಸ್ರಾರು ಜನ ಗಂಡಸರ ಮಧ್ಯ ತಾನೂ ಒಬ್ಬ ಗಂಡ್ಸಾಗಿ ಕೂತಿದ್ದು ಅವನಿಗೆ ಹೇಗ್ಹೇಗೋ ಆಯಿತು. "ಇರ್ಲಿ ನನ್ನ ಗಂಡಸ್ತನಾನೂ ಒಂದಿಷ್ಟು ಹೊರಗೆ ಹಾಕೇಬಿಡಬೇಕು" ಅನ್ನೋ ಶುದ್ಧಭಾವದಿಂದ ಅವನು ಒಂದಿಷ್ಟು ಉತ್ತರನ ಪೌರುಷ್ಯವನ್ನು ಮೆಲ್ಲಗೆ ತನಗೆ ತಾನೇ ಹೇಳಿಕೊಂಡು ಅದನ್ನು ಜೋರಾಗಿ ಹೇಳಿದೆನೆಂದು ಭ್ರಮಿಸಿದ. ಮಿಂಚಿಹೋದ ಆ ಮಾತುಗಳನ್ನು ನ್ಯಾಯಾಧೀಶರು ಬಟ್ಟೆ ಬದಲಾ

ಯಿಸಿಕೊಂಡು ಎಲ್ಲಿ ಕೇಳ್ಬಿಟ್ಟು ತನ್ನ ಕೊರಳಿಗೆ ಉರುಳು ಎಲ್ಲಿ ಬಿದ್ದು ಬಿಡುತ್ತದೆಯೊ ಏನೊ ಎನ್ನುವ ಗಾಬರಿಯಿಂದ ಅವನು ದಂಗು ಬಡೆದು ಕುಳಿತ. "ನ್ಯಾಯಾಧೀಶರು ಯಾವಾಗ್ಬಂದಾರು? ಅವ್ರ ಮುಖ ಚರ್ಯೇನ ಯಾವಾಗ್ನೋಡೇನು?" ಎಂಬ ಆತುರ ಅವನಿಗೆ ಹತ್ತಿತು.

ಹೆಂಗಸರ ಗ್ಯಾಲರಿಯಲ್ಲಿ ಕುಳಿತಿದ್ದ ಈ ಮಹಾಶಯನ ಹೆಂಡತಿ ತನ್ನ ನೆರೆಯುವಳನ್ನು ಕುರಿತು "ನಮ್ಮ ವಶಕ್ಕೆ ಇಂಥೋರ್ನ ಒಂದು ತಿಂಗಳು ಒಪ್ಪಿಸಿಬಿಟ್ಟರೆ ಸಾಕು... ಇವರನ್ನೆಲ್ಲಾ ನ್ಯಾಯಾಸ್ಥಾನದ್ವರ್ಗ್ಗೂ ತರೋ ಗೋಜೇ ಇರೊಲ್ಲ" ಎಂದು ಅಪರಾಧಿಯ ಕಡೆ ಬೆರಳು ಮಾಡಿ ಅಸಾಧ್ಯವಾಗಿ ಬಡಬಡಿಸುತ್ತಾ, ತನ್ನ ಮಾತಿನ ಗತ್ತಿನಿಂದಲೇ ಅಕ್ಕ ಪಕ್ಕದಲ್ಲಿದ್ದ ಹೆಣ್ಣು ಹೆಂಗಸರನ್ನು ಪಕ್ಕಪಕ್ಕಕ್ಕೆ ಒತ್ತರಿಸಿ ತಾನು ಮಟ್ಟಿಗೆ ಆರಾಮವಾಗಿ ಕುಳಿತಳು.

* * * *

ಸನಾತನಿಗಳು ಸ್ವಲ್ಪ ಹೊತ್ತಾಗಿ ಬಂದಿದ್ದರಿಂದ ಅವರಿಗೆ ಅಷ್ಟೇನೂ ಅನುಕೂಲವಾದ ಜಾಗ ಸಿಗಲಿಲ್ಲ. ಅವರ ಜೊತೆಗೇ ಬಂದಿದ್ದ ಮುನಿಯನೂ ಗಲಾಟೆಯಲ್ಲಿ ಕಣ್ಮರೆಯಾಗಿದ್ದ. ಸನಾತನಿಗಳು ತಮ್ಮ ಪಾಲಿಗೆ ಬಂದ ಜಾಗವನ್ನೇ ಪಂಚಾಮೃತವೆಂದುಕೊಂಡು ಅಷ್ಟರಲ್ಲೆ ಅಚ್ಚುಕಟ್ಟು ಮಾಡಿಕೊಂಡರು. ಸ್ವಲ್ಪ ಹೊತ್ತಾದ ಮೇಲೆ ಅವರಿಗೆ ನಾಲಗೆಯ ಚಟ ಜಾಸ್ತಿಯಾಗಿ ತಮ್ಮ ಅವಿಚ್ಛಿನ್ನ ಭಕ್ತ ಮುನಿಯನ ಜ್ಞಾಪಕ ಬಂತು. ಸ್ವಲ್ಪ ದೂರದಲ್ಲೇ ಗಲಾಟೆಯಲ್ಲಿ ಅಪ್ಪಚ್ಚಿಯಾಗುತ್ತಿದ್ದ ಮುನಿಯ ಕಾಣಿಸಿದ. ಅವನನ್ನು ನೋಡುತ್ತಲೆ ಸನಾತನಿಗಳು "ಅಯ್ಯೋ ಮುನಿಯಾ! ಪರಮಾತ್ಮಾ!" ಎಂದದ್ದೂನೂ ಆರ್ಭಟದಿಂದ ಜನರನ್ನೆಲ್ಲ ಮೋಹಗೊಳಿಸಿ ಮುಖಸನ್ನೆಯಿಂದ ಮುನಿಯನನ್ನು ತಮ್ಮೆಡೆಗೆ ಬರಮಾಡಿಕೊಂಡರು. ಮುನಿಯ "ಅಡ್ಡಬಿದ್ದೆ ನನ್ನೊಡೆಯಾ" ಎಂದು ಇಮ್ಮಡಿಸಿದ್ದ ಗೌರವದಿಂದ ಹೇಳಿದ.

ಸನಾತನಿಗಳು ಅಪರಾಧಿಯ ಕಡೆ ಬೆರಳು ಮಾಡಿ ಮುನಿಂ

ನನ್ನು ಕುರಿತು ಅಲ್ಲೇ ಒಂದು ಉಪನ್ಯಾಸಕ್ಕೇ ಷುರು ಮಾಡಿಬಿಟ್ಟರು:— "ಏನು ಹೇಳ್ಳೋಪ್ಪಾ ಮುನಿಯಾ! ಎಷ್ಟು ವಿಚಿತ್ರವೋಪ್ಪಾ ಪರಮಾತ್ಮನ ಲೀಲೆ! ಆ ಅಪರಾಧಿಯ ಮುಖದ್ಮೇಲೇ ಬರೆದ್ಬಿಟ್ಟಿದ್ಯಲ್ಲೋಪ್ಪಾ ಅವ್ನು ಮಕ್ಕಳ್ನ ಕೊಲ್ಲೋ ಈ ನೀಚ ಕಸಬ್ಗಾಗೇ ಹುಟ್ಟಿದಾನೆ ಅಂತ. ಅವನ ವೇಷದಲ್ಲೇ ಸಿದ್ಧವಾಗಿದ್ಯಲ್ಲೋಪ್ಪಾ ಈ ವಿಷಯ. ಆ ಕರ್ಮಫಲ ಅನ್ನೋದು ಅವನ ಮುಖದ ಮೇಲೇ ಬರೆ........" ಇನ್ನೂ ಏನೇನೊ ಹೇಳ್ಬೇಕು ಅಂದುಕೊಂಡಿದ್ದ ಸನಾತನಿಗಳು ಅಲ್ಲಲ್ಲಿ ಅವರನ್ನೇ ಕುಟುಕ್ತಾ ಇದ್ದ ಕಣ್ಣುಗಳನ್ನು ನೋಡಿ ನಿಲ್ಲಿಸಿ ಬಿಟ್ಟರು. ಕೆಂಡ ಕಾರುತ್ತಾ ಹತ್ತು ಮಾರಾಚೆ ನಿಂತಿದ್ದ ಕ್ರಾಂತಿಪಕ್ಷದ ವೀರ ನಾಯಕನನ್ನು ನೋಡಿದ ಮೇಲಂತೂ ಸನಾತನಿಗಳಿಗೆ ಒಂದು ನಮೂನೆ ಭೀತಿಯಾಯಿತು. ನ್ಯಾಯಾಸ್ಥಾನದೊಳಗೆ ಇನ್ನು ಉಪನ್ಯಾಸ ಮಾಡದಿರುವುದೇ ಲೇಸೆಂದುಕೊಂಡು ಅವರು ಮುಗುಂ ಆದರು. ಹಠಾತ್ತಾಗಿ ಅವರು ಉಪನ್ಯಾಸ ನಿಲ್ಲಿಸಿದ್ದರಿಂದ ಮುನಿಯ ಭಕ್ತಿ ಸಮಾಧಿಯಿಂದ ಎಚ್ಚೆತ್ತು ಪ್ರಶ್ನೆ ಮಾಡಿದ:—"ಇದ್ಯೇನು ನನ್ನೊಡ್ಯಾ ನಿಲ್ಲಿಸೇ ಬಿಟ್ರಲ್ಲಾ?"

ಸನಾತನಿಗಳು ಮೆಲ್ಲಗೆ "ಇಲ್ಲಿ ಈಗ ಬಹಳ ಗಲಾಟೆ........ಹೊರಗಡೆ ಹೋದ್ಮೇಲೆ ಎಲ್ಲಾ ನಿಧಾನವಾಗಿ ಉಪದೇಶ ಮಾಡ್ತೇನೆ" ಎಂದು ಮರು ನುಡಿದರು.

* * * *

ಸಾಹಿತಿ ಸ್ವಲ್ಪ ಹೊತ್ತಾಗಿ ಬಂದರೂ ಅವರಿಗೆ ಅನುಕೂಲವಾದ ಜಾಗವೇ ಸಿಕ್ಕಿತು. ಏಕೆಂದರೆ, ಅಲ್ಲಿ ನೆರೆದಿದ್ದ ವಿದ್ಯಾರ್ಥಿಗಳು ಮತ್ತು ಯುವಕರು ಸಾಹಿತಿಗಳಿಗೆ ಯೋಗ್ಯವಾದ ಜಾಗವನ್ನು ಮಾಡಿಕೊಟ್ಟರು. ಅಲ್ಲದೆ ಅಷ್ಟು ನೂಕು ನುಗ್ಗಲು ಇದ್ದರೂ ಸಹ ಸಾಹಿತಿಯ ಸುತ್ತ ಸ್ವಲ್ಪ ಜಾಗ ಬಿಟ್ಟು ಜನ ದೂರ ಸರಿದಿದ್ದರು.

ಸಾಹಿತಿ ದೀರ್ಘಾಲೋಚನೆಯಲ್ಲಿ ಮಗ್ನನಾಗಿ ಕುಳಿತ. ಅವನು ಇದುವರೆವಿಗೂ ಗಳಿಸಿದ್ದ ಮಹತ್ವವನ್ನು ಉಳಿಸಿಕೊಳ್ಳಲು ಇನ್ನು

ಒಂದು ತಿಂಗಳೊಳಗೆ ಅವನು ಬರೆಯಲೇ ಬೇಕಾಗಿದ್ದ ಕಾದಂಬರಿಗೆ ಅವನಿಗೆ ಇನ್ನೂ ಕಥಾ ಸನ್ನಿವೇಶವೇ ಹೊಳೆದಿರಲಿಲ್ಲ. ಆ ಅಪರಾಧಿಯನ್ನು ನೋಡಿಯಾದರೂ ಏನಾದರೂ ಅದೃಷ್ಟ ಕುಲಾಯ್ಸುವುದೊ ಏನೊ ಎಂದು ಅವನನ್ನೆ ದಿಟ್ಟಿಸಿದ! ಅವನು ಕುಳಿತಿದ್ದ ಜಾಗದಿಂದ ಅಪರಾಧಿಯ ಮುಖ ಮಾತ್ರ ಕಾಣುತ್ತಿತ್ತು. "ಹು, ಅವನ ಮುಖ ಕಾಣ್ಸಿದ್ರೇನಾಯ್ತು........ಇನ್ನೂ ಅವನು ಜೀವನದಲ್ಲಿ ಕೆಲವು ಅಡ್ಡ ದಾರಿಗಳನ್ನು ಮೆಟ್ಟಿ ಅದರ ಪರಿಚಯವಾದ್ರೂ ಆದ್ರೆ ಒಂದೇಕೆ........ ಒಂದೊಂದು ಅಡ್ಡ ದಾರೀನೂ ಒಂದೊಂದು ಕಥೆ ಮಾಡ್ಬಿಟ್ಟು ಎಳದ್ಬಿಡ್ತಿದ್ದೆ." ಎಂದು ಸಾಹಿತಿ ನಿಟ್ಟುಸಿರು ಬಿಡುತ್ತಾ ತನ್ನಲ್ಲಿ ತಾನೇ ಹೇಳಿಕೊಂಡ.

ಮುಂದುವರಿಯೋದೇ ಸಾಹಿತ್ಯದ ಮುಂಗುರಿ ಎಂಬೋದನ್ನ ಮುಂಗಡವಾಗಿ ಮುಂದಿಟ್ಟು ಹಿಂದುಳಿದ ಜನರ ಹೊನ್ನಿನ ಮೆಹರ್ಬಾನಿಯಿಂದ ಈ ಸಾಹಿತಿ ಮುಂದಕ್ಕೆ ಬಂದಿದ್ದ. ಕಂಗೆಟ್ಟ ಕಾಗೆಯಂತೆ ಅವನು ಕಥಾಸನ್ನಿವೇಶ ಒಂದಕ್ಕಾಗಿ ಬಾಯ್ಬಿಡುತ್ತಿದ್ದ ಆ ಆಪತ್ಕಾಲದಲ್ಲೂ ಅವನ ಕಣ್ಣು ಮಾತ್ರ ಅದರ ಚಾಳನ್ನು ಚಾಚೂ ತಪ್ಪದೆ ಹೆಂಗಸರ ಗ್ಯಾಲರಿಯ ಕಡೆ ಹೊರಳಿತು. ಇದ್ದಕ್ಕಿದ್ದಂತೆಯೆ ಸಾಹಿತಿಗೆ ಹಿಡಿಸಲಾರದಷ್ಟು ಆನಂದವಾಯಿತು. ಸಹಸ್ರಾರು ಜನ ಕುಳಿತಿದ್ದ ಆ ಹೆಂಗಸರ ಗ್ಯಾಲರಿಯಲ್ಲಿ ಅವನಿಗೆ ಇತ್ತೀಚಿಗೆ ಪರಿಚಿತಳಾಗಿದ್ದ ಮರೀಪೇಟೆಯ ಪ್ರಿಯತಮೆ ಕಂಡಳು. ಅವಳನ್ನೇ ನೋಡುತ್ತ ನೋಡುತ್ತ ಅವನ ಮೈಯೆಲ್ಲಾ ಕಣ್ಣಾಗಿ ಅವನಿಗೆ ಬಹಳ ಆನಂದವಾಯಿತು. ಕಥಾಸನ್ನಿವೇಶದ ಯೋಚನೆಯಂತೂ ಸಂಪೂರ್ಣವಾಗಿ ಮಾಯವಾಯಿತು. ಆದರೆ ಒಳಗೊಳಗೆ ಆಗುತ್ತಿದ್ದ ಈ ಭಾವನೆಗಳನ್ನು ಕೊಂಚವೂ ತೋರಗೊಡದೆ ಅವನು ಮುಖದ ಮೇಲೆ ಗಾಂಭೀರ್ಯದ ಹೊದಿಕೆ ಹೊದ್ದಿದ್ದ. ಸ್ವಲ್ಪ ಹೊತ್ತು ಅವಳನ್ನೇ ನೋಡಿದ ಮೇಲೆ ಅವನ ದೃಷ್ಟಿ ಅವಳ ಪಕ್ಕಕ್ಕೆ ಹೊರಳಿತು. ಅತ್ತ ನೋಡಿದೊಡನೆಯೆ ಅವನಿಗೆ ಒಮ್ಮೆಲೇ ನಾಚಿಕೆ ಮತ್ತು ಗಾಬರಿಯಾಗತೊಡಗಿತು. ಆ ಸಹಸ್ರಾರು

ಜನ ಹೆಂಗಸರಿದ್ದ ಗ್ಯಾಲರಿಯಲ್ಲಿ ಇವನ ಮರೇಪೇಟೆಯ ಪ್ರಿಯೆಯ ಪಕ್ಕದಲ್ಲಿ ಇವನ ಹೆಂಡತಿ ಮತ್ತು ಸಣ್ಣ ಕೂಸು ಕುಳಿತಿರಬೇಕೆ! ಸಾಹಿತಿಯ ಮುಖದ ಮೇಲೆ ಬೆವರು ಹನಿಯಲು ಶುರು ಆಯಿತು. ಆ ಸನ್ನಿವೇಶದಲ್ಲೂ ಅವನು ವಿವೇಚನೆ ಕಳೆದುಕೊಳ್ಳದೆ ಕೂಡಲೆ ಅಪರಾಧಿಯ ಕಡೆಗೆ ತಿರುಗಿ ತಕ್ಷಣವೆ ತಲೆ ತಗ್ಗಿಸಿ ಶೋಕ ಸಮಾಧಿಯನ್ನು ಹೊಕ್ಕವನಂತೆ ಕಾಣಿಸಿಕೊಂಡ. ಹತ್ತಿರವೆ ಇದ್ದ ವಿದ್ಯಾರ್ಥಿ ಸಂಘದ ಕಾರ್ಯದರ್ಶಿ ಅವನ ಮಿತ್ರರನ್ನು ಕುರಿತು ಸಾಹಿತಿಯನ್ನು ಸೂಚಿಸುತ್ತಾ ಹೇಳಿದ:—"ನೋಡ್ರೀ........ಅಬ್ಬಾ........ಅವರ ಹೃದಯದಲ್ಲಿ ಅಪರಾಧಿಗೂ ಅಂತಃಕರಣ ಇದೆ........ಆಹಾ! ವಿಶಾಲವಾದ ಹೃದಯ." ಎಂದು ಉತ್ತಮವಾದ ಸಾಹಿತ್ಯದ ವಿಷಯವಾಗಿ ಅವನು ಪುಸ್ತಕಗಳಲ್ಲಿ ಓದಿದ್ದ ವಿಶೇಷಣಗಳನ್ನೆಲ್ಲಾ ಈ ಸಾಹಿತಿಗೆ ಅನ್ವಯಿಸಿ ಹೇಳಿ ಅನಂತರ, "ನಮ್ಮ ಸಂಘದ ಆಶ್ರಯದಲ್ಲಿ ಒಂದು ಉಪನ್ಯಾಸ ಮಾಡ್ಬೇಕು ಅಂತ ಕೇಳ್ಕೊಂಡಿದೀನಿ.......ಮುಕ್ಕಾಲು ವಾಸಿ ಕಾಮನ ಹಬ್ಬದ ದಿನ ಆಗಬಹುದು ಉಪನ್ಯಾಸ" ಎಂದು ಮಾತನ್ನು ನಿಲ್ಲಿಸಿದ.

* * * *

ಗಂಡಸರ ಗ್ಯಾಲರಿಯಲ್ಲಿ ಮುಂದುಗಡೆಯೆ ಇದ್ದ ಉನ್ನತಾಸನವನ್ನು ಪ್ರಗತಿ ಪಕ್ಷದ ರಾಜಕೀಯ ತರುಣ ಮುಖಂಡರಿಗಾಗಿಯೆ ಜನ ಕಾದಿರಿಸಿದ್ದರು. ತರುಣ ಮುಖಂಡರು ಬಂದೊಡನೆಯೆ ಆ ಪೀಠವನ್ನು ಅಲಂಕರಿಸಲು ಜನ ಅವರನ್ನು ಬೇಡಿಕೊಂಡರು. ತರುಣ ಮುಖಂಡರು ಅಸಾಧ್ಯ ವಿನಯ ತೋರುತ್ತಾ "ನನಗೆ ಯಾಕೆ ಇಷ್ಟು ಮರ್ಯಾದೆ!.... ನಾನಿರುವುದು ನಿಮ್ಮ ಸೇವೆಗೆ" ಎನ್ನುತ್ತಲೇ ಆಸನಾರೂಢರಾದರು. ಎಲ್ಲರೂ ಅವರನ್ನೇ ಭಯಭಕ್ತಿಯಿಂದ ನೋಡುತ್ತಿರುತ್ತಾರೆಂಬುದನ್ನು ಅವರು ಮುಂಗಡವಾಗಿಯೆ ತಿಳಿದಿದ್ದುದರಿಂದ ಆಸನಾರೂಢರಾದ ಮರುಕ್ಷಣವೆ ಅವರು ಕಿಟಕಿಯಾಚೆ ನೋಡುತ್ತಾ ಆಕಾಶವನ್ನು ಪರೀಕ್ಷಿಸತೊಡಗಿದರು.

* * * *

ಅಪರಾಧಿಯನ್ನು ಮರದ ಕಟ್ಟೆಕಟ್ಟೆಯಲ್ಲಿ ತಂದು ನಿಲ್ಲಿಸಿದ್ದೇ ತಡ, ಗೂಂಡ ಅವನನ್ನು ಹೊರಗಿನಿಂದಲೆ ಕಷ್ಟಪಟ್ಟುಕೊಂಡು ನೋಡತೊಡಗಿದ. ಅವನು ನೇರವಾಗಿ ಅಪರಾಧಿಯನ್ನು ನೋಡುವ ಹಾಗಿರಲಿಲ್ಲ. ಮೊದಲನೆಯ ಅಡ್ಡಿ ಎಂದರೆ ಪೋಲೀಸಿನವನ ಕೈ. ಅದರ ಕೆಳಗೇ ಗೂಂಡ ಬಗ್ಗಿ, ಜನರು ಅತ್ತಿಂದಿತ್ತ ಓಲಾಡಿದಾಗ ಆಗುತ್ತಿದ್ದ ಒಂದು ಸಂದಿಯಿಂದಲೇ ಅವಕಾಶ ಮಾಡಿಕೊಂಡು ಅಪರಾಧಿಯನ್ನು ಈಕ್ಷಿಸುತ್ತಿದ್ದ. ಅನೇಕ ಕೋಣಗಳಿಂದ ಅಪರಾಧಿಯನ್ನು ನೋಡಿದ್ದರಿಂದ ಒಂದು ಸಲ ಅವನ ಕಾಲು, ಒಂದು ಸಲ ಕೈ, ಭುಜ, ಮುಖ, ಹೀಗೆ ಅವನಿಗೆ ಕಾಣಿಸುತ್ತ ಬಂತು. ಅಂತೂ ಕಡೆಗೆ ಅವನಿಗೆ ಅಪರಾಧಿಯ ಅಂಗಾಂಗ ಪರಿಚಯವಾದ ಹಾಗಾಯಿತು !

ಗೂಂಡ ತನ್ನಲ್ಲೇ ಯೋಚಿಸಿದ :—"ಅಲ್ಲ, ಈ ಚಂಡಾಲ ಒಳ್ಳೇ ಆನೆ ಇದ್ದ್ಹಾಗೆ ಇದಾನೆ........ಆ ನ್ಯಾಯಾಧೀಶರ್ನ ನಾನು ಕಾಣ್ನೇ .... ಅವ್ರು ಒಳ್ಳೇ ಪರ್ಕೀಕಡ್ಡಿ ಇದ್ದ್ಹಾಗಿದಾರೆ....ಅವ್ರೇ ಇವನ್ಗೆ ಶಿಕ್ಷೆ ಕೊಡ್ಬೇಕು ಅನ್ನೋದೇನು ನಿಯಮ" ಎಂದು. ಪುನಃ ಅವನು ಯೋಚನೆಯನ್ನು ಮುಂದುವರಿಸಿದ :—"ಅಲ್ಲಾ ನನ್ಗೆ ದೇವ್ರು ಕೊಟ್ಟ್ಹಾಗೆ ಬಲ ಇದೆ....ಅವನು ಚಂಡಾಲ ಅನ್ನೋದು ಎಲ್ಲರಿಗೂ ಗೊತ್ತಾಗಿದೆ." ಎಂದು ಯೋಚಿಸಿದೊಡನೆಯೆ ಅವನು ತನಗಿದ್ದ ನಾಲ್ಕನೆಯ ಅವಕಾಶವನ್ನು ಉಪಯೋಗಿಸಿಕೊಳ್ಳಲು ಇದೇ ಯೋಗ್ಯವಾದ ಸಮಯವೆಂದು ನಿರ್ಧರಿಸಿದ.

ತಕ್ಷಣವೆ ಪೋಲಿಸ್ನೋನ ಮೇಲ್ಬಿದ್ದು, ಜನಗಳ್ನೂ ಭೇದಿಸ್ಕೊಂಡ್ಹೋಗಿ ಅಪರಾಧಿಯ ಮೇಲೆ ಒಂದ್ಕೈ ನೋಡೇಬಿಡೋಣ ಎನ್ನುವ ನಿರ್ಧಾರವನ್ನು ತನ್ನಲ್ಲೇ ಮಾಡ್ಕೊಂಡು, ಪೋಲೀಸ್ನೋನ ಮೇಲೆ ಹಠಾತ್ತಾಗಿ ಬಿದ್ದು ಅವನು ತಡೆಯಾಗಿ ಹಿಡ್ದಿದ್ದ ಒಂದ್ಕೈನ ದಬಾಯ್ಸೀ ಬಿಟ್ಟ. ಪೋಲೀಸ್ನೋನ್ಗೆ ವಿಪರೀತ ಸಿಟ್ಟು ಬಂತು. ಇನ್ನೊಂದು ಕೈಯಿಂದ ಅವನು ಗೂಂಡನಿಗೆ 'ಫಟೀರ್' ಎಂದು ಕೊಟ್ಟ. **ಏಟು ಬಿದ್ದ ಮೇಲಂತೂ** ಗೂಂಡ ನಿರಾಯಾಸವಾಗಿ ಕಾರ್ಯರಂಗಕ್ಕೆ

ಇಳಿಯುವಂತಾಯ್ತು. ಪೋಲೀಸ್ನೋನು ಕೊಟ್ಟ ಒಂದೇಟಿಗೆ ಗೂಂಡ ಉತ್ತರವಾಗಿ ಅವನ ಮೈ ಮುಖ ಅಂತ ನೋಡದೆ ಪಳಗಿದ್ದ ಕೈಯಿಂದ ಹತ್ತಾರು ಏಟುಗಳ್ನ ಒಂದೇ ನಿಮಿಷದಲ್ಲಿ ಏರಿಸ್ಬಿಟ್ಟ. ಈ ಅವಾಂತರಾನ ನೋಡಿ ಅಲ್ಲಿ ಒಂದು ಸಣ್ಣ ಗುಂಪೇ ಸೇರಿತು. ಹತ್ತಿರವೆ ಇದ್ದ ಟೆಲಿಫೋನಿನ ಮೂಲಕ ಸುದ್ದಿ ಪೋಲೀಸ್ ಠಾಣೆಯನ್ನು ಮುಟ್ಟು ವುದಕ್ಕೂ ಹೆಚ್ಚು ಹೊತ್ತು ಹಿಡಿಯಲಿಲ್ಲ.

ಕೇವಲ ಹತ್ತೇ ನಿಮಿಷಗಳಲ್ಲೇ ಪೋಲೀಸ್ ಅಧಿಕಾರಿಗಳು ಇಬ್ಬರು ಸಾಮಾನ್ಯ ಪೋಲೀಸರ ಮತ್ತು ಗೆಳೆಯರೊಬ್ಬರ ಜೊತೆಗೂಡಿ ಮೋಟಾರಿನಲ್ಲಿ ಬಂದು ದೊಡ್ಡ ಚೌಕವನ್ನು ಸೇರಿಯೆ ಬಿಟ್ಟರು. "ಇನ್ನೊಂದ್ಕಾಲ್ಗಂಟೇಲೇ ಕೇಸ್ನ ಸಮ್ಮಾಯ್ಸಿ ಮಾಡ್ಬಿಟ್ಟು ಬಂದ್ಬಿಡ್ತೀನೆ. ಆಮೇಲೆ ನೇರ್ವಾಗಿ ಸಿನೇಮಾಕ್ಕೇ ಹೊರಟ್ಬಿಡೋಣ" ಎಂದು ಕಣ್ಣನ್ನು ಕುಣಿಸುತ್ತಾ, ಹುಬ್ಬನ್ನು ಹಾರಿಸುತ್ತಾ, ಪೋಲೀಸ್ ಅಧಿಕಾರಿಗಳು ಮೋಟರಿನಲ್ಲೇ ಕುಳಿತಿದ್ದ ಗೆಳೆಯರಿಗೆ ಹೇಳಿ ಆ ಇಬ್ಬರು ಸಾಮಾನ್ಯ ಪೋಲೀಸಿನವರನ್ನು ಹಿಂದೆ ಹಾಕಿಕೊಂಡು ಹೊರಟರು. ನ್ಯಾಯಾಸ್ಥಾನ ಸೇರುತ್ತಲೆ ಅಧಿಕಾರಿಗಳು ಬಾಗಿಲಿನಲ್ಲೇ ಜಮಾಯ್ಸಿದ್ದ ಗುಂಪಿನೊಳಗೆ ಅಧಿಕಾರ ದರ್ಪದಿಂದ ಬಂದು ನಡೆದುದೆಲ್ಲವನ್ನೂ ಆತುರದಿಂದ ಕೇಳಿ ತಿಳಿದುಕೊಂಡರು.

ತಕ್ಷಣವೆ ಅವರು ಗೂಂಡನಿಂದ ಏಟು ತಿಂದು ತತ್ತರಿಸುತ್ತಿದ್ದ ಪೋಲೀಸಿನವನನ್ನು ಕುರಿತು "ಎಲ್ಲರೂ ಒಳಗೆ ಬಿಡಬೇಕೆಂಬ ಕಾನೂನನ್ನು ತಿಳಿದೂ ಈ ಜನಗಳನ್ನ ಹೊರಗೆ ಏಕೋ ನಿಲ್ಲಿಸಿದ್ದಿ ?"ಎಂದು ಜಬರಿಸಿದರು. ಅನಂತರ ಜೊತೆಗೆ ಬಂದ ಒಬ್ಬ ಪೋಲೀಸಿನವನನ್ನು ಕುರಿತು "ಇವನನ್ನು ಠಾಣೆಗೆ ಕರೆದುಕೊಂಡು ಹೋಗಿ ಬಂಧನದಲ್ಲಿಟ್ಟಿರು. ಕಾರ್ಯಕ್ರಮ ತೊಗೋಬೇಕು." ಎಂದು ಅಪ್ಪಣೆಯಿತ್ತರು. ಅವರ ಅಪ್ಪಣೆಯಂತೆ ಆ ಪೋಲೀಸಿನವನು ಬಾಗಿಲಿನಲ್ಲಿ ನಿಂತಿದ್ದ ಪೋಲೀಸಿನವನಿಗೆ ಬಳೆ ತೊಡ್ಸಿದ್ದೂನೂ ಕರೆದುಕೊಂಡು ಹೊರಟ. ಗೂಂಡನಿಂದ ಏಟುತಿಂದು ಈಗ ಕೆಲಸವೇ

ಹೋಗಿ ಸಜಾ ಅನುಭವಿಸ್ಬೇಕಾದ ಸಂದರ್ಭವನ್ನು ನೆನೆಯುವುದಕ್ಕೂ ಅಂಜುತ್ತಾ ಆ ಪೋಲೀಸಿನವನು ಆಕಾಶವನ್ನೊಮ್ಮೆ, ನೆಲವನ್ನೊಮ್ಮೆ ನೋಡುತ್ತಾ, ಆ ದೊಡ್ಡ ಬ್ರಹ್ಮಾಂಡದಲ್ಲಿ ತಾನು ಎಷ್ಟು ಅಲ್ಪನೆಂಬು ದನ್ನು ಮಿಂಚಿಹೋದ ಮೇಲೆ ಯೋಚಿಸಿದುದಕ್ಕಾಗಿ ಮರುಗುತ್ತಾ, ಕೈ ಕೈ ಹಿಸಕಿ ಕೊಳ್ಳುತ್ತಾ, ಕೈಗಳಿಗೆ ಹಾಕಿದ್ದ ಬಳೆಗಳ ಮೇಲೆ ಕಣ್ಣೀರು ಹಾಕುತ್ತಾ ಹೊರಟ. ಅನಂತರ ಅಧಿಕಾರಿಗಳು ಗೂಂಡ ನನ್ನು ಸೂಚಿಸುತ್ತಾ ಮತ್ತೊಬ್ಬ ಪೋಲೀಸಿನವನನ್ನು ಕುರಿತು "ಇವನನ್ನು ಕರೆದುಕೊಂಡು ಹೋಗಿ ಬಂಧನದಲ್ಲಿಡು. ಅವನ ಮೇಲೆ ಬಿದ್ದು ಗಾಯಗೊಳಿಸಿದ್ದಕ್ಕೆ ನಾಳೇನೇ ಇವನ್ಮೇಲೆ ಕೇಸು ಹಾಕಿ ಬಿಡ್ಬೇಕು" ಎಂದು ಅಪ್ಪಣೆಯಿತ್ತರು. ಗೂಂಡನ ಕೈಗೂ ಬಳೆಗಳನ್ನು ತೊಡಿಸಿದ್ದಾಯಿತು. ಪೋಲೀಸಿನವನ ಜೊತೆಗೆ ಒಂದು ರೀತಿಯಿಂದ ಗೂಂಡ ನಿರಾತಂಕವಾಗಿಯೇ ಹೊರಟ.

ಬಾಗಿಲಿನ ಹೊರಗಡೆ ಪೋಲೀಸಿನವನ ಬೆದರಿಕೆಗೆ ಬಲೆ ಬಿದ್ದು ನಿಂತಿದ್ದ ಮಂದಿಯನ್ನು ಕುರಿತು ಅಧಿಕಾರಿಗಳು, "ನೀವೆಲ್ಲಾ ಒಳಗೆ ಹೋಗಬಹುದು....ಯಾವ ಅಡ್ಡಿಯೂ ಇಲ್ಲ" ಎಂದು ಹೇಳಿದವರೇ ಅಲ್ಲಿಂದ ಆತುರರಾಗಿ ದೊಡ್ಡ ಚೌಕದ ಕಡೆ ಹೊರಟುಬಿಟ್ಟರು. ಬಾಗಿ ಲಿನ ಹೊರಗಡೆ ನಿಂತಿದ್ದ ಮಂದಿಗೆ ಅಧಿಕಾರಿಗಳು ಇತ್ತ ಭರವಸೆಯಲ್ಲಿ ಅಷ್ಟೇನೂ ನಂಬಿಕೆ ತಟ್ಟಲಿಲ್ಲ. ಅಲ್ಲೇ, ಹೊರಗಡೆಯೇ, ನಿಂತಿರುವುದು ಲೇಸೆಂಬ ಮನೋಭಾವವನ್ನು ಅವರು ಕಾರ್ಯರೂಪಕ್ಕೆ ತಂದರು.

ಗೂಂಡನಿಂದ ಹೊರಗಡೆ ಆದ ಗಲಾಟೆ ನ್ಯಾಯಾಸ್ಥಾನದ ಒಳ ಗಿದ್ದವರ ವರೆವಿಗೆ ಬರಲೇ ಇಲ್ಲ. ಅಲ್ಲದೆ ನ್ಯಾಯಾಸ್ಥಾನದೊಳಗೂ ಹುಚ್ಚುಗಲಾಟೆ ಇದ್ದುದರಿಂದ ಈ ಸಣ್ಣ ಗಲಾಟೆಯೂ ಅದರ ಜೊತೆಗೆ ಬೆರೆತಿತ್ತು.

*　*　*　*

ಇನ್ನೇನು ನ್ಯಾಯಾಧೀಶರು ಬರುವ ಕಾಲ ಸಮೀಪಿಸುತ್ತಿತ್ತು. ಹೆಂಗಸರ ಗ್ಯಾಲರಿಯಲ್ಲಂತೂ ಆಗ ವಿಪರೀತ ಗಲಾಟೆಗಿಟ್ಟ

ಕೊಂಡಿತ್ತು. ಬಲಗಡೆ ಕೊನೆಯಲ್ಲಿ ಕುಳಿತಿದ್ದ ಹೆಂಗಸೊಬ್ಬಳು ತನ್ನ ಎರಡು ಕೈಗಳನ್ನೂ ಎಸೆದು "ಅಯ್ಯೋ, ಒಳ್ಳೇ ರಾಜನ ಹಾಗೆ ಇದ್ದೀಯಲ್ಲೋ....ಅಯ್ಯೋ ನನ್ರಾಜ....ನಿನ್ಗೆ ಈ ಗತೀಯೇನೋಪ್ಪಾ.... ಮುತ್ತಿಡೋಣಾ ಅನ್ಸತ್ತಲ್ಲೋಪ್ಪಾ" ಎಂದು ಕೂಗುತ್ತಿದ್ದಳು. ಅವಳು ಗಂಡನೊಡನೆ ಸಂಸಾರ ಹೂಡಿದ್ದೇ ತಡ, ಕೇವಲ ಎರಡೇ ತಿಂಗಳಲ್ಲಿ ಗಂಡನನ್ನು ಅತಿ ಪ್ರೇಮದಿಂದ ಕೊಂದುಬಿಟ್ಟು ವೈದ್ಯ ಮಂಡಲಕ್ಕೇ ಮಂಕು ಹಿಡಿಸಿ ಬಿಟ್ಟಿದ್ದಳು. ಅವಳ ಮಾತುಗಳನ್ನು ಕೇಳಿ ಪಕ್ಕದಲ್ಲಿದ್ದ ಯುವತಿಯೊಬ್ಬಳು, "ಸುಮ್ನಿರೀಮ್ಮಾ ಸಾಕು....ಅಸಹ್ಯವಾಗುತ್ತೆ ನಿಮ್ಮ ವರ್ತನೆ....ಒಳ್ಳೇ ಪಿಶಾಚಿ ಇದ್ದಾ್ಹಗಿದಾನೆ... ಅವನ್ಮ್ಯಖದ್ಮೇಲೇನು ಅಳ್ತಾ ಇರೋದು ರಾಜ ಕಳೆ" ಎಂದು ಬಡಬಡಿಸಿದಳು. ಆ ಯುವತಿ ಆಗಲೆ ನಾಲ್ಕು ವಿಚ್ಛೇದನಗಳನ್ನು ಪೂರೈಸಿದ್ದಳು. ಆದರೂ ತೃಪ್ತಿಯಾಗದೆ, ತನಗೆ ಸಮರ್ಪಕವಾದ, ಸರ್ಯಾದ ಗಂಡನ್ನು ಹುಡುಕುವ ಪ್ರಯತ್ನವನ್ನು ಇನ್ನೂ ಬಿಟ್ಟಿರಲಿಲ್ಲ.

೮

ಹನ್ನೆರಡು ಘಂಟೆ ಹೊಡೆದುದೆ ತಡ ನ್ಯಾಯಾಧೀಶರು ಅವರ ಪೀಠವನ್ನು ಅಲಂಕರಿಸಿದರು. ಆಸನಾರೂಢರಾದ ಕೂಡಲೆ ಅವರು ಕೂಗು ಗಂಟೆಯನ್ನು ಒಮ್ಮೆ ತಟ್ಟಿದರು. ಅದನ್ನು ಕೇಳಿ ನ್ಯಾಯಾಸ್ಥಾನದಲ್ಲಿ ಇದ್ದಕ್ಕಿದ್ದಂತೆ ಪೂರ್ಣ ನಿಶ್ಯಬ್ದ ನೆಲೆಸಿತು. ಆಗ ನೆಲೆಸಿದ ನಿಶ್ಯಬ್ದವನ್ನು ನೋಡಿದರೆ ಸ್ವಲ್ಪ ಹಿಂದೆ ಆಗುತ್ತಿದ್ದ ಹುಚ್ಚುಗಲಾಟೆಯೆಲ್ಲಾ ಬರೇ ಸುಳ್ಳು ಎನಿಸುವಂತಿತ್ತು. ಅಲ್ಲಿನ ಜನಗಳ ಶಿಸ್ತು ಜೀವನ ಅಷ್ಟರ ಮಟ್ಟಿನದಾಗಿತ್ತು. ನ್ಯಾಯಾಧೀಶರು ಕೂಗುಗಂಟೆ ಬಾರಿಸಿದರೆಂದರೆ ತುಟಿ ಪಿಟಕ್ಕೆನ್ನದೆ ಆಲೈಸುವ ಶಿಸ್ತಿನ ಅಭ್ಯಾಸ ಅವರಲ್ಲಿ ಅಷ್ಟು ಚೆನ್ನಾಗಿತ್ತು. ಆಗ ಅಲ್ಲಿ ನೆಲೆಸಿದ್ದ ನಿಶ್ಯಬ್ದ ಎಷ್ಟರ ಮಟ್ಟಿಗಿತ್ತೆಂದರೆ ಗಡಿಯಾರದ 'ಟಿಕ್, ಟಿಕ್' ಶಬ್ದವೇ ದೊಡ್ಡದಾಗಿ ಕೇಳಬರುತ್ತಿತ್ತು.

“ಕೇಸನ್ನು ಕೇಳಲು ನಾವು ಸಿದ್ಧರಿದ್ದೇವೆ,” ಎಂದರು ನ್ಯಾಯಾಧೀಶರು. ಅವರು ಆಡಿದ ಮಾತನ್ನು ದೊಡ್ಡದಾಗಿ ಶ್ರುತಿಮಾಡುವ ಉಪಕರಣಗಳನ್ನು ನ್ಯಾಯಾಸ್ಥಾನದ ನಾನಾ ಮೂಲೆಗಳಲ್ಲೂ ತಗುಲಿಸಿದ್ದುದರಿಂದ ಅವರ ಮಾತುಗಳು ನ್ಯಾಯಾಸ್ಥಾನವನ್ನೆಲ್ಲಾ ತುಂಬಿದುವು.

ನ್ಯಾಯಾಸ್ಥಾನದ ಪೀಠವನ್ನಲಂಕರಿಸಿ ನ್ಯಾಯಮೂರ್ತಿಯಂತೆ ಕೂಡುವ ನ್ಯಾಯಾಧೀಶರು ಬಹುವಚನ ಯೋಗ್ಯರು ಎಂಬುದನ್ನು ಮನಗಂಡು, ಆ ರಾಷ್ಟ್ರದಲ್ಲಿ ನ್ಯಾಯಾಧೀಶರು ತಮ್ಮನ್ನು ಬಹುವಚನದಲ್ಲಿ ಆಡಿಕೊಳ್ಳಬೇಕೆಂಬ ನಿಯಮವನ್ನು ಮಾಡಿದ್ದರು. ಅದಕ್ಕಾಗಿಯೆ ನ್ಯಾಯಾಧೀಶರು “ಕೇಸನ್ನು ಕೇಳಲು ನಾವು ಸಿದ್ಧರಿದ್ದೇವೆ” ಎಂದು ಬಹುವಚನ ಪ್ರಯೋಗ ಮಾಡಿಕೊಂಡದ್ದು.

* * * *

ನ್ಯಾಯಾಧೀಶರ ರೂಢಿಯ ಅಪ್ಪಣೆಯ ತಾತ್ಪರ್ಯಕ್ಕೆ ಉತ್ತರವಾಗಿ ಸಭಾಮಂಟಪದ ಮುಂದುಗಡೆ ಕುಳಿತಿದ್ದ “ಪಬ್ಲಿಕ್ ಪ್ರಾಸಿಕ್ಯೂಟರ್”ರು ಎದ್ದು ನಾಲ್ಕು ದಿಕ್ಕಿಗೂ ತಿರುಗಿ, ಜನರಿಗೆ ದರ್ಶನವಿತ್ತು, ಕೈಸನ್ನೆಯಿಂದ ಅಭಿನಂದಿಸಿದರು. ಅವರು ಇನ್ನೂ ಎಳೆಯ ವಯಸ್ಸಿನವರು. ನೋಡಲು ಲಕ್ಷಣವಾಗಿದ್ದರು. ಅಷ್ಟು ಸಣ್ಣ ವಯಸ್ಸಿನಲ್ಲೆ ನ್ಯಾಯ ಶಾಸ್ತ್ರದಲ್ಲಿ ಪ್ರಚಂಡ ವಿದ್ವಾಂಸರೆಂಬ ಹೆಸರನ್ನು ಈ ದೇಶದಲ್ಲಿ ಮಾತ್ರವಲ್ಲದೆ ಹೊರದೇಶಗಳಲ್ಲೂ ಗಳಿಸಿದ್ದರು. ಅವರನ್ನು ನೋಡುತ್ತಲೆ ನ್ಯಾಯಾಸ್ಥಾನದಲ್ಲಿದ್ದ ಬಹು ಜನ, ಸಿನೇಮಾ ಮಂದಿರದಲ್ಲಿ ಪರದೆಯ ಮೇಲೆ ಮುಖವಾಡ ಇಟ್ಟುಕೊಂಡು ದೇವರು ಪ್ರತ್ಯಕ್ಷವಾದಾಗ ಮುಂದೆ ಕೂತಿರುವ ಜನ ತಮ್ಮ ಉದ್ರೇಕ ಉದ್ವೇಗಗಳನ್ನೂ, ಭಯಭಕ್ತಿಯನ್ನೂ ಸರ್ವತೋಮುಖವಾಗಿ ಹೊರಗೆಡಹಲು ಅನುಸರಿಸುವ ರೀತಿನೀತಿಯನ್ನೇ ಅನುಸರಿಸಿದರು.

* * * *

**ಗಂಡಸರ ಗ್ಯಾಲರಿಯ** ಬಲಭಾಗದ ಅಂಚಿನಲ್ಲಿ ನಿಂತಿದ್ದ ಲಾಯ

ರೊಬ್ಬರು ನೆರೆಯುವರನ್ನು ಕುರಿತು, " ಅವನಲ್ಲಿ ಏನು ಅಂಥಾ ಪ್ರತಿಭೆ ಕೊಳ್ಳೀ ಹೋಗ್ತಾ ಇರೋದು....ಸುಮ್ನೆ ಒಂದೇ ಸಮುಕ್ಕೆ ಜನರೆಲ್ಲಾ ಚಪ್ಪಾಳೆ ಹೊಡ್ದು ಬಾಯ್ಬಾಯ್ಬಿಡೋಕೆ?" ಎಂದರು. ನೆರೆಯ ಯುವಕ ಉತ್ತರವಾಗಿ " ಏಕಿಲ್ಲ ಸ್ವಾಮಿ....ಅಂಥಾ ಯೋಗ್ಯತೆ ಅವ್ರಿಗೆ ಇರೋದ್ರಿಂದಲೆ ಜನರೆಲ್ಲ ಅವ್ರನ್ನ ಸನ್ಮಾನಿಸೋಮ....ಹೋಗ್ಲಿ.... ಅಂಥಾ ಯೋಗ್ಯತೆ ಇನ್ಯಾರ್ಗಿದೆ ಹೇಳಿ ಮತ್ತೆ....ನೋಡೋಣ" ಎಂದ. ಲಾಯರು " ಏಕಿಲ್ಲ ಸ್ವಾಮಿ" ಎಂದು ಜರಿಯುವ ದನಿಯಲ್ಲಿ ಹೇಳಿ ಮುಖ ಚಾಚಿದರು. " ಎಲ್ಲಿ ಬಂತು ಸ್ವಾಮಿ....ಅಂಥೋರಿದ್ದಿದ್ರೆ ಜನ ಅವ್ರಿಗೂ ಚಪ್ಪಾಳೆ ಸ್ವಾಗತ ಕೊಡ್ತಿದ್ರು" ಎಂದ ಯುವಕ ನಿಶ್ಚಿತ ದನಿಯಲ್ಲಿ. ಲಾಯರು " ಏಕೆ! ನಾನೇ ಇಲ್ವೇ" ಎಂದು ತಮ್ಮಲ್ಲೇ ಅಂದುಕೊಂಡು ಮುಖವನ್ನು ಬೇರೆ ಕಡೆಗೆ ತಿರುಗಿಸಿ ಸಂಭಾಷಣೆ ಯನ್ನು ಸಾಕುಮಾಡಿದರು.

ನ್ಯಾಯಶಾಸ್ತ್ರದಲ್ಲಿ ಈ ಲಾಯರಿಗೆ ಪರಿಶ್ರಮವೇನೊ ಇದ್ದದ್ದರಲ್ಲಿ ಚೆನ್ನಾಗಿಯೆ ಇತ್ತು. ಆದರೆ ಅನೇಕ ಕಾರಣಗಳಿಂದ ಇವರಿಗೆ ಮುಂದೆ ಬರುವ ಯೋಗ ಒದಗಲಿಲ್ಲ. ಅವರ ಪಾಂಡಿತ್ಯದ ಆಳ ಅವರೊಬ್ಬರಿಗೆ ಮಾತ್ರ ತಿಳಿದಿತ್ತು. ಅವರಿಗೆ ಇನ್ನೂ ಮಧ್ಯ ವಯಸ್ಸು. ಆದರೆ ಅವರ ಬೆಳ್ಳಗಾಗಿದ್ದ ಕೂದಲು ಮತ್ತು ದೀರ್ಘ ಯೋಚನೆಯಿಂದ ಬತ್ತಿಹೋಗಿದ್ದ ಮುಖ ಅವರ ವಯಸ್ಸನ್ನು ಬಹಳ ಮಟ್ಟಿಗೆ ಉತ್ಪ್ರೇಕ್ಷೆ ಮಾಡುತ್ತಿದ್ದುವು.

* * * *

'ಪಬ್ಲಿಕ್ ಪ್ರಾಸಿಕ್ಯೂಟರ್'ರಿಗೆ ಸ್ವಾಗತವೀಯಲು ನ್ಯಾಯಾಧೀಶರು ತಮಗೆ ತೋರಿದಷ್ಟು ಕಾಲಾವಕಾಶವನ್ನು ಜನರಿಗೆ ಕೊಟ್ಟು, ಅನಂತರ ಕೂಗುಗಂಟೆಯನ್ನು ತಟ್ಟಿದರು. ಕೂಡಲೆ ಪೂರ್ಣ ನಿಶ್ಶಬ್ದ ನೆಲೆಸಿತು. 'ಪಬ್ಲಿಕ್ ಪ್ರಾಸಿಕ್ಯೂಟರ್'ರು ಮಾತನಾಡಲು ಮೊದಲು ಮಾಡಿದರು. ಜನ ಅವರಿಗೆ ತೋರಿದ ಸ್ವಾಗತದಿಂದ ಅವರು ಉಲ್ಲಾಸ ಗೊಂಡಿದ್ದುದರಿಂದ ಅವರ ಬಾಯಿಂದ ಮಾತುಗಳು ಲಘುವಾಗಿ,

ವಿರಳವಾಗಿ, ಮುತ್ತಿನಂತೆ ಹೊರಬಿದ್ದುವು. ಒಳ್ಳೆ ಅರಗಿಳಿಯಂತೆ ಮಾತನಾಡಿದರು ಎಂದರೆ ಅತಿಶಯೋಕ್ತಿ ಎನಿಸಲಾರದು.

"ಎರಡು ಮೂರು ದಿವಸಗಳಿಂದ, ಮಕ್ಕಳನ್ನು ಕದ್ದುಕೊಂಡು ಹೋಗಿ ಕೊಲ್ಲುವ ಸುಪ್ರಸಿದ್ಧ ವಿದೇಶಿ ಜನಾಂಗ ನಮ್ಮ ರಾಜಧಾನಿಗೆ ಬಂದು ಹಾವಳಿ ಮಾಡುತ್ತಿರುವುದನ್ನು ನಾವು ಕೇಳಿರುವೆವಷ್ಟೆ. ಕಾಡು ಜನರಂತೆ ಕಂಡರೂ, ಅತಿ ಬುದ್ಧಿ ಮತ್ತು ಚಾಲೂಕಿನಿಂದ ಕೂಡಿರುವ ಈ ನೀಚ ಜನಾಂಗಕ್ಕೆ ಸೇರಿರುವ ಜನಗಳ ಗೊತ್ತುವಳಿ ಇಡೀ ಪ್ರಪಂಚಕ್ಕೇ ತಿಳಿದಿದೆಯಷ್ಟೆ. (ಚಪ್ಪಾಳೆ.... ಕೂಗುಗಂಟೆ.... ಪೂರ್ಣ ನಿಶ್ಯಬ್ದ)........(ಅಪರಾಧಿಯನ್ನು ಸೂಚಿಸುತ್ತಾ) ಉದ್ದನೆಯ ತೋಳುಗಳು, ಕೋರೆ ಹಲ್ಲುಗಳು, ಮಟಗಾದ ಮೂಗು, ಸಾಸುವೆಯನ್ನು ಹೋಲುವ ಕಣ್ಣುಗುಡ್ಡು (ಚಪ್ಪಾಳೆ.... ಅಲ್ಲಲ್ಲಿ 'ಸಾಹಿತ್ಯದಲ್ಲಿ ಎಂತಹ ಪ್ರಚಂಡ ಜ್ಞಾನ'ಎಂಬ ಕೂಗು.... ಕೂಗುಗಂಟೆ.... ನಿಶ್ಯಬ್ದ)... ಆನೆಯ ಸೊಂಡಲಿನಂತಿರುವ ಕುತ್ತಿಗೆ.... ಇವುಗಳನ್ನು ಒಬ್ಬ ಕುರುಡ ಕತ್ತಲಲ್ಲಿ ಗುರ್ತಿಸಿದರೂ ಉತ್ಪ್ರೇಕ್ಷೆ ಎನಿಸಲಾರದು." (ಚಪ್ಪಾಳೆ ಮತ್ತು ಗದ್ದಲ........)

ಚಪ್ಪಾಳೆಗಳ ಮಧ್ಯೆ ಅವರ ಮಾತುಗಳು ಕಾವೇರಿದ್ದ ಸಮಯಗಳಲ್ಲಿ, ಗುಡುಗಿನ ಮಧ್ಯದಲ್ಲಿ ಮಿಂಚು ಎದ್ದು ಕಂಡಂತೆ, ಕಿವಿಯನ್ನು ಹೊಡೆದೆಬ್ಬಿಸುವಂತೆ ಕೇಳಬರುತ್ತಿತ್ತು. ಆ ಕೋಲಾಹಲವನ್ನೂ ಭೇದಿಸಿಕೊಂಡು ಅವರ ಮಾತುಗಳಿಗೆ ಕಳೆಕಟ್ಟುವುದಕ್ಕೆ ಮುಖ್ಯ ಕಾರಣವೆಂದರೆ ಅಲ್ಲಲ್ಲಿ ತಗುಲಿಸಿದ್ದ ಮಾತನ್ನು ಜೋರಾಗಿ ಶ್ರುತಿ ಮಾಡುವ ಉಪಕರಣಗಳು. ಜನರೆಲ್ಲ ಚಪ್ಪಾಳೆಯಲ್ಲಿ ತೊಡಗಿದ್ದಾಗ ಗಂಡಸರ ಗ್ಯಾಲರಿಯ ಬಲಭಾಗದಲ್ಲಿ ನಿಂತಿದ್ದ ಲಾಯರು "ಅವರು ಹೇಳುವ ಮಾತು ಅಷ್ಟೇನೂ ಶಾಸ್ತ್ರಸಮ್ಮತವಾಗಿ ತೋರೋದಿಲ್ಲ.... ಆದರೂ ಸುಮ್ಮನೆ ಜನರೆಲ್ಲಾ ಚಪ್ಪಾಳೆ ತಟ್ಟುತ್ತಿದ್ದಾರೆ" ಎಂದರು.

ಚಪ್ಪಾಳೆ ಹೊಡೆಯುತ್ತಾ 'ಪಬ್ಲಿಕ್ ಪ್ರಾಸಿಕ್ಯೂಟರ್'ರ ಮುಖ ನೋಡಲು ಎಗರಾಡುತ್ತಿದ್ದ ಯುವಕ, "ಒಳ್ಳೇ ಮಾತನ್ನೇ ಆಡ್ತೀರಿ

ಸ್ವಾಮಿ ನೀವೂನೂ....ಅವರ ಮಾತ್ನಲ್ಲಿ ಅಷ್ಟು ಮಹತ್ವ ಇಲ್ದೇ ಇದ್ದಿದ್ರೆ ಜನರೆಲ್ಲಾ ಹೀಗೆ ಚಪ್ಪಾಳೆ ತಟ್ತಾ ಇರ್ತಿದ್ರೇ?" ಎಂದ.

ಆ ಯುವಕನ ಮಾತನ್ನು ಕೇಳಿ, ಬತ್ತಿಹೋಗಿದ್ದ ಕೆರೆಯ ಮೈದಾನದಲ್ಲಿ ಬಿರುಕೊಂದು ಒಡೆದಂತೆ, ಆ ಲಾಯರ ಮುಖದಲ್ಲಿ ಒಂದು ಹೊಸ ಯೋಚನೆ ಒಡೆದು ಕಂಡಿತು. 'ಕ್ಯಾಮರಾ' ಗಳನ್ನು ಹಿಡಿದು 'ಪಬ್ಲಿಕ್ ಪ್ರಾಸಿಕ್ಯೂಟರ್'ರು ಕೊಡುತ್ತಿದ್ದ 'ಪೋಸು'ಗಳನ್ನು ಆದಷ್ಟು ಇಳಿಸಿಬಿಡುವ ಆತುರದಲ್ಲಿ ತೊಡಗಿದ್ದ ಪತ್ರಿಕೆಗಳ 'ಕ್ಯಾಮರಾಮನ್'ಗಳ ಕಡೆ ತಿರುಗಿ ಲಾಯರು ಶೂನ್ಯ ದೃಷ್ಟಿಯಿಂದ ನೋಡಿದರು.

* * * *

ಅನಂತರ ನ್ಯಾಯಾಧೀಶರು ಕೂಗುಗಂಟೆ ತಟ್ಟಿದರು. ಪುನಃ ಪೂರ್ಣ ನಿಶ್ಶಬ್ದ. 'ಪಬ್ಲಿಕ್ ಪ್ರಾಸಿಕ್ಯೂಟರ್'ರು ಮುಂದುವರಿಸುತ್ತಾ, ಆ ಜನಾಂಗದ ವಿಷಯವಾಗಿ ಬರೆದಿರುವ ಚಿತ್ರಗಳನ್ನೊಳಗೊಂಡ ಅನೇಕ ದೇಶ ವಿದೇಶಿ ಪ್ರಕಟಣೆಗಳನ್ನು ಪ್ರಮಾಣಗಳನ್ನಾಗಿ ಹೇಳಿ, ಆ ಪ್ರಮಾಣಗಳನ್ನು ಸಂಪ್ರದಾಯದ ಪ್ರಕಾರ 'ನ್ಯಾಯ ಸನ್ನಿಧಿ'ಯಲ್ಲಿ ಅರ್ಪಣೆಮಾಡಿದರು. ಅವರು ಒಂದೊಂದು ಸಲ ಹಾಗೆ ಪ್ರಮಾಣವನ್ನು ಅರ್ಪಣೆ ಮಾಡಲು 'ನ್ಯಾಯ ಸನ್ನಿಧಿ'ಯ ಕಡೆ ತೆರಳಿದಾಗಲೂ, ಜನರೆಲ್ಲ ಕೈ ಚಪ್ಪಾಳೆ ಮತ್ತು ಬಾಯ್ಬುಡುಬುಡಕೆಗಳಿಂದ ಅವರಿಗೆ ಸಲ್ಲುವ ಹಿಮ್ಮೇಳವನ್ನು ಒಡ್ಡುತ್ತಿದ್ದರು. ನ್ಯಾಯಾಧೀಶರನ್ನು 'ನ್ಯಾಯ ಸನ್ನಿಧಿ' ಎಂದು ಸಂಬೋಧಿಸಬೇಕೆಂದು ಅಲ್ಲಿ ಕಾನೂನಿನ ಪ್ರಕಾರ ವಿಧಿಸಲಾಗಿತ್ತು.

ಚಪ್ಪಾಳೆಗಳ ಶಬ್ದ 'ಛಟ್ ಪಟ್' ಎಂದು ಮೊಳಗುತ್ತಿರುವಲ್ಲಿ 'ಪಬ್ಲಿಕ್ ಪ್ರಾಸಿಕ್ಯೂಟರ್'ರು ಪಟ್ಟಾಭಿಷೇಕದ ಶುಭ ಮಂಟಪಕ್ಕೆ ತೆರಳುತ್ತಿರುವ ರಾಜಕುಮಾರನನ್ನು ಹೋಲುವ ಠೀವಿಯನ್ನು ಅನುಸರಿಸಿ 'ನ್ಯಾಯ ಸನ್ನಿಧಿ'ಯ ಸಾಮೀಪ್ಯವನ್ನು ಸೇರಿದರು. ಅನಂತರ ಯಥಾ ವಾಡಿಕೆಯಂತೆ ನಮಸ್ಕರಿಸಿ, ಮಗುವನ್ನು ಹಗಲಿನಲ್ಲಿ, ಪೇಟಿ

ಯಲ್ಲಿ, ಕಿತ್ತುಕೊಳ್ಳಲು ಅಪರಾಧಿ ಕೈ ಹಾಕುತ್ತಿರುವ ಛಾಯಾ ಚಿತ್ರವನ್ನು 'ಸನ್ನಿಧಿ' ಯಲ್ಲಿ ಪ್ರಮಾಣವನ್ನಾಗಿ ಅರ್ಪಣೆ ಮಾಡಿದರು. ಅನಂತರ ಅವರು ಹಿಂತಿರುಗಿ ಮುಂದಿಗೆ ಅಭಿನಂದಿಸಿ ಸ್ವಸ್ಥಾನ ಸ್ಥಾಪಿತರಾದರು.

ನ್ಯಾಯಾಧೀಶರು ಕೂಗುಗಂಟೆ ತಟ್ಟಿದೊಡನೆಯೆ ಚಪ್ಪಾಳೆಗಾಗಿ ರೆಟ್ಟೆಗಳಲ್ಲಿದ್ದ ಆತುರ ಕೈಗಳ ವರೆವಿಗೂ ಬರಲಾರದೆ ಅಲ್ಲಿಯೇ ನಿಂತು ಹೋಯಿತು. ಪೂರ್ಣ ನಿಶ್ಶಬ್ದ ನೆಲೆಸಿತು. 'ಪಬ್ಲಿಕ್ ಪ್ರಾಸಿಕ್ಯೂಟರ್'ರು ತಮ್ಮ ಸ್ವಾರಸ್ಯವಾದ, ಜನರೆಲ್ಲ ಮೋಹಿಸಿದ್ದ ವಾಕ್ಯಾರ್ಥವನ್ನು ಮುಕ್ತಾಯ ಮಾಡಿ ವಿರಮಿಸುವ ಸಲುವಾಗಿ ಇಂತೆಂದರು:– "ಸನ್ನಿಧಿಯಲ್ಲಿ ವಿಷಯವನ್ನು ಸಪ್ರಮಾಣವಾಗಿ, ಸವಿಸ್ತಾರವಾಗಿ, ವಿಶದೀಕರಿಸಿ ವಿರಮಿಸುತ್ತಿರುವ ನಾನು ಕೊನೆಯದಾಗಿ ಹೇಳ ಬಯಸುವುದಿಷ್ಟೆ. ಸತ್ಪಾತ್ರದಲ್ಲಿ ದಾನ ಮಾಡು ಎಂದು ನಾಣ್ನುಡಿ. ಅಂದರೆ ಯಾವುದೊಂದು ಇದೇ (ಮುಖ ಸನ್ನೆ ಮಾಡುತ್ತಾ) ಆಗಲಿ ಸಾರ್ಥಕ್ಯವನ್ನು ಸಾಧಿಸಲು ಶಕ್ಯವಾಗಬೇಕಾದರೆ ಪಾತ್ರವೂ ಅಷ್ಟೇ ಸರಿಯಾಗಿರಬೇಕು. (ಚಪ್ಪಾಳೆ.... ಕೂಗುಗಂಟೆ.... ನಿಶ್ಶಬ್ದ)........ ಈ ನಾಣ್ನುಡಿಯನ್ನು ಪ್ರಕೃತ ಅಂದರೆ ಈ ಸಂದರ್ಭದಲ್ಲಿ, ಉದಹರಿಸಲು ನಾನು ಉದ್ಯುಕ್ತನಾದುದರ ಉದ್ದೇಶವಾದರೂ ಇಷ್ಟೆ. ಮರಣ ದಂಡನೆಯಂಥ ಶಿಕ್ಷೆ ಸಾರ್ಥಕ್ಯವನ್ನು ಹೊಂದಬೇಕಾದರೆ (ಅಪರಾಧಿಯನ್ನು ಸೂಚಿಸುತ್ತಾ) ಇಂತಹ ಸತ್ಪಾತ್ರವಲ್ಲದೆ ಬೇರೊಂದು ಅಲಭ್ಯ. ಒಟ್ಟಿನಲ್ಲಿ, ಒಂದೇ ನಿಮಿಷದಲ್ಲಿ, ಅಂದರೆ ಒಂದೇ ಮಾತಿನಲ್ಲಿ, ನನ್ನ ವಾದದ ಸಾರಾಂಶವನ್ನು, ತಾತ್ಪರ್ಯವನ್ನು, ತಿರುಳನ್ನು ಹೇಳಿ ಮುಗಿಸಿಬಿಡುವುದಾದರೆ....ಮರಣ ದಂಡನೆಯೇ ಈ ಅಪರಾಧಕ್ಕೆ ಸರಿಯಾದ, ಸೂಕ್ತವಾದ ಶಿಕ್ಷೆ........ಸನ್ನಿಧಿಯ ಅಪ್ಪಣೆಪಡೆದು ನನ್ನ ಮಾತನ್ನು ಮುಗಿಸಿ ವಿರಮಿಸುತ್ತೇನೆ....ನ್ಯಾಯ ಚಿರಾಯುವಾಗಲಿ!" ಎಂದವರೇ ಅವರು ಚಪ್ಪಾಳೆಗಳ ಶುಭ ಸಂದೇಶವನ್ನು ನಾಲ್ಕು ದಿಕ್ಕಿಗೂ ತಿರುಗಿ ಸ್ವೀಕಾರ ಮಾಡಿ ಅನಂತರ ಆಸನಾರೂಢರಾದರು.

೯

ಕೂಗುಗಂಟೆ ಕೇಳಿಬಂದೊಡನೆಯೆ ಯಥಾಪ್ರಕಾರ ನಿಶ್ಶಬ್ದ ನೆಲೆಸಿತು. 'ಪಬ್ಲಿಕ್ ಪ್ರಾಸೀಕ್ಯೂಟರ್'ರ ಕಡೆ ನೋಡಿ ನ್ಯಾಯಾಧೀಶರು ಪ್ರಸನ್ನರಾದರು. ಅನಂತರ ಅಪರಾಧಿಯ ಕಡೆ ತಿರುಗಿ, ಗಂಟಲನ್ನು ಸರಿಮಾಡಿಕೊಂಡು, "ಅಪರಾಧಿಯ ಹೇಳಿಕೆ ಕೇಳಲು ನಾವು ಸಿದ್ಧರಿದ್ದೇವೆ" ಎಂದರು. ತಕ್ಷಣ ನ್ಯಾಯಾಸ್ಥಾನದಲ್ಲೆಲ್ಲಾ ಗುಲ್ಲೆದ್ದಿತು.

* * * *

'ಅವನ ಯೋಗ್ಯತೆಗಿಷ್ಟು ಅದೂ ಒಂದು ಕೇಡು....ನಮ್ಮ ದೇಶವಾದ್ದರಿಂದ ಅವನಿಗೂ ಒಂದು ಮನ್ನಣೆ ದೊರಕಿದೆ....ಪಬ್ಲಿಕ್ ಪ್ರಾಸಿಕ್ಯೂಟರರ ಮಾತಾದ ಮೇಲೂ ಅವನಲ್ಲಿ ಏನು ಉಳಿದಿದೆ ಹೇಳಿಕೆ ಕೊಡುವುದಕ್ಕೆ!" ಎಂದು ಲಾಯರ ಪಕ್ಕದಲ್ಲಿ ಕುಳಿತಿದ್ದ ಯುವಕ, ಅಪರಾಧಿಯನ್ನು ಸೂಚಿಸಿ, ಜರೆದು ಮಾತಾಡಿದ. ಈಗಾಗಲೆ ಲಾಯರಿಗೂ ಆ ತರುಣನಿಗೂ 'ಪಬ್ಲಿಕ್ ಪ್ರಾಸಿಕ್ಯೂಟರ್'ರ ಯೋಗ್ಯಾಯೋಗ್ಯತೆಗಳ ವಿಷಯವಾಗಿ ಚರ್ಚೆ ನಡೆದು ಅವರಿಬ್ಬರ ಮಧ್ಯೆ ಈ ಅಲ್ಪಾವಕಾಶದಲ್ಲಿ ಬೆಳೆದು ಬಂದಿದ್ದ ಪರಿಚಯಕ್ಕೆ ಕಹಿ ಹಿಂಡಿದಂತಾಗಿತ್ತು. ಈಗ ಯುವಕ ಆಡಿದ ಮಾತನ್ನು ಕೇಳಿ ಲಾಯರಿಗೆ ಪೂರಾ ಸಿಟ್ಟು ಬಂತು. ಆದರೂ, ಅದನ್ನು ತೋರಿದರೆ ಅದರಿಂದ ತಮಗೇ ಹೆಚ್ಚು ನಷ್ಟವೆಂಬುದನ್ನು ಸಕಾಲದಲ್ಲಿ ಮನಸ್ಸಿಗೆ ತಂದುಕೊಂಡದ್ದರಿಂದ, ಅವರು ಆ ಯುವಕನ ಮಾತನ್ನು ಕೇಳಿಯೂ ಕೇಳದಂತೆ ಆಕಾಶದ ಕಡೆಗೆ ಮುಖವನ್ನು ಮಾಡಿ ನ್ಯಾಯಾಸ್ಥಾನದಲ್ಲಿ ನಡೆಯುತ್ತಿರುವ ವಿಚಾರಕ್ಕಿಂತ ಸಾವಿರ ಪಾಲು ದೊಡ್ಡ ವಿಷಯ ಒಂದರಲ್ಲಿ ತಲ್ಲೀನರಾದಂತೆ ಕಾಣಿಸಿಕೊಂಡರು.

ನ್ಯಾಯಾಧೀಶರು ಬಂದಾರೇ, ಅವರ ಮುಖ ಚರ್ಯೆನ ನೋಡೇನೇ ಎಂದು ಕಳವಳದಿಂದ ಕಾಯುತ್ತಾ ಗಂಡಸರ ಗ್ಯಾಲರಿಯಲ್ಲಿ ಕುಳಿತಿದ್ದ ಅಮ್ಮಾವ್ರ ಗಂಡ–ಗಂಡಸು ಮಹಾಶಯ–ನ್ಯಾಯಾ

ಧೀಶರು ಆಸನಾರೂಢರಾದಲಾಗಾಯ್ತು ಈ ವರೆವಿಗೂ ಅವರ ಮುಖ ವನ್ನೆ ನೋಡುತ್ತಾ ಭಯಭೀತನಾಗುತ್ತಿದ್ದ. ನ್ಯಾಯಾಧೀಶರು ನಾನಾ ರೀತಿಯಿಂದ, ಅಂದರೆ ಒಂದೊಂದು ಸಲ ಅವನು ನೋಡಿ ದಾಗಲೂ ಒಂದೊಂದು ರೀತಿಯಿಂದ, ಅವನನ್ನೇ ದುರುಗುಟ್ಟಿಕೊಂಡು ನೋಡುತ್ತಿರುವಂತೆ ಅವನಿಗೆ ತೋರಿತು. ತಾನು ಆಡಿದ, ತನ್ನ ನಾಲಗೆಯಿಂದ ಮಿಂಚಿಹೋದ, ಮಾತುಗಳನ್ನು ನ್ಯಾಯಾಧೀಶರು ಕೇಳಿಯೇ ಬಿಟ್ಟಿದ್ದಾರೆಂದು ಅವನಿಗೆ ಸ್ಪಷ್ಟವಾಗುತ್ತ ಬಂದಮೇಲಂತೂ ಅವನು ತನ್ನಲ್ಲಿ ಎದ್ದ ಭಯಕ್ಕೆ ತಾನೇ ದಾಸನಾಗಿ ಬಲಿಬಿದ್ದ. ಅವನ ಕಣ್ಣು ತೆರೆದಿದ್ದರೂ ಮುಚ್ಚಿದ ಪ್ರಾಯವೇ ಆಗಿತ್ತು ; ಕಿವಿ ತೆರೆದಿದ್ದರೂ ಮುಚ್ಚಿದ ಸಮಾನವೇ ಆಗಿತ್ತು. ನ್ಯಾಯಾಸ್ಥಾನದಲ್ಲಿ ನಡೆಯುತ್ತಿದ್ದ ಯಾವ ವಿಚಾರವೂ ಅವನ ಗಮನಕ್ಕೆ ಬರಲಿಲ್ಲ. ನ್ಯಾಯಾಧೀಶರ ಕಡೆ ನೋಡದೆ ಇದ್ದರೆ ಭೀತಿ ಕಡಿಮೆ ಆಗುವುದೊ ಏನೊ ಎಂದು ಕೊಂಡು ಅವನು ತಲೆ ತಗ್ಗಿಸಿ ನೆಲ ನೋಡುತ್ತಾ ಕುಳಿತ. ಕಣ್ಮುಚ್ಚಿ ದರೂ ಕನಸಿನಲ್ಲಿ ಕಾಡುವಂತೆ, ನ್ಯಾಯಾಧೀಶರು ಅವನು ಎತ್ತ ನೋಡಿ ದರೆ ಅತ್ತ ಕಂಡಂತೆ ಅವನಿಗೆ ಭಾಸವಾಗುತ್ತ ಬಂತು. ನ್ಯಾಯಾ ಸ್ಥಾನದ ತುಂಬ ಆಗುತ್ತಿದ್ದ ಗದ್ದಲ ಇವನ ಪಾಲಿಗೆ ಇಲ್ಲದ ಸಮಾನ ವಾಗಿತ್ತೆಂದೇ ಹೇಳಬಹುದಾಗಿತ್ತು. ಅಂತೂ, ಅವನೂ ಆ ಮಂದಿ ಯಲ್ಲಿ ತನ್ನ ಭೀತಿಯನ್ನು ತಾನೇ ಅಡಗಿಸಿಕೊಳ್ಳಲಾರದವನಾಗಿ ಹೇಗೊ ಕುಳಿತಿದ್ದ.

ಸನಾತನಿಗಳು ಮಂದಿಯಲ್ಲಿ ಏಳುತ್ತಿದ್ದ ಆವೇಶದಲ್ಲಿ ತಮ್ಮ ಯಥಾ ಕಿಂಚಿತ್ತನ್ನೂ ಸೇರಿಸಿಯೇಬಿಡೋಣವೆಂದುಕೊಂಡು, ತಮ್ಮ ಯಥಾ ಮಾತುಗಳಿಗೆ ತಥಾ ಮುದ್ರೆಯನ್ನು ಸರ್ವಥಾ ಒತ್ತುತ್ತಿದ್ದ ಮುನಿಯನ ಕಡೆ ತಿರುಗಿ " ಪರಮಾತ್ಮನ ಲೀಲೆ ಅಂಬೋದು ಎಷ್ಟು ಅರ್ಥಪೂರಿತವೋಪ್ಪಾ ಮುನಿಯ....(ಕಂಠವನ್ನು ಶ್ರುತಿಮಾಡಿ ಕೊಳ್ಳುತ್ತಾ)....ಹ್ಞ ಹ್ಞ....ಆ...." ಎಂದು ಮಾತನ್ನು ಆರಂಭಿಸುತ್ತಿರು ವಲ್ಲೆ, ಅವರ ಸಮೀಪದಲ್ಲೆ ನಿಂತಿದ್ದ ಕ್ರಾಂತಿಪಕ್ಷದ ವೀರ ನಾಯಕ

ಒಂದುಬಾರಿ ಕೆಮ್ಮಿದ. ಮುಂದಿಯಲ್ಲಿದ್ದ ಆವೇಶದಿಂದ ಭ್ರಾಂತರಾಗಿ, ಮಾತನಾಡಲು ಉಪಕ್ರಮಿಸಿದ್ದ ಸನಾತನಿಗಳು ಈತನ ಇರುವಿಕೆಯನ್ನೇ ಮರೆತು ಬಿಟ್ಟಿದ್ದರು. ಈಗ ಅವನ ಕೆಮ್ಮು ಕೇಳಿದೊಡನೆಯೆ ಅವರಲ್ಲಿ ಒಂದು ನಮೂನೆ ಭೀತಿ ಎದ್ದು ಹೊಟ್ಟೆ ತೊಳಸಿದಂತಾಯ್ತು. ಅವನ ಕೆಮ್ಮೇ ಅವರ ಪಾಲಿಗೆ ಸಿಂಹನಾದವಾಯ್ತು. ಆದರೂ ಅವರು ಆ ಭೀತಿಯನ್ನು ತೋರಲಪೇಕ್ಷಿಸದೆ ಸಂಭಾಷಣೆಯನ್ನು ಒಂದು ರೀತಿಯಿಂದ ಸಹಜವಾಗಿಯೆ ಕೊನೆ ಮುಟ್ಟಿಸುವ ಶಾಸ್ತ್ರಮಾಡಲು "ಹ್ಹ....ಹ್ಹ....ಆ...." ಎಂದು ಏನನ್ನೋ ಹೇಳಬಯಸಿದರು. ಆದರೆ ಅವರ ನಾಲಿಗೆ ಹಿಡಿತಕ್ಕೆ ಸಿಗದೆ ನಡುಗುತ್ತಿದ್ದು ಹಠಾತ್ತಾಗಿ ಹಲ್ಲುಗಳ ಮಧ್ಯೆ ಕಚ್ಚಿಕೊಂಡು ತುಸು ರಕ್ತ ಚೆಲ್ಲಿ ಒಳಗೊಳಗೆ ನೋವೆಬ್ಬಿಸಿತು. ಸನಾತನಿಗಳು ತಮ್ಮ ರಕ್ತವನ್ನು ತಾವೇ ಹೀರಬೇಕಾದ ವಿಷಮ ಪರಿಸ್ಥಿತಿಯಲ್ಲಿದ್ದರೂ, ಬಾಹ್ಯಾಡಂಬರದಿಂದ ಅದನ್ನು ತೋರಗೊಡದೆ ಮುನಿಯನನ್ನು ತಾತ್ಸಾರದಿಂದ ನೋಡಿದರು. ಮುನಿಯನಂಥವನೊಡನೆ ತಾವು ಸಂಭಾಷಣೆಯನ್ನು ಮುಂದುವರಿಸುವುದು ಅನುಚಿತವೂ, ಅಯೋಗ್ಯವೂ ಎಂಬ ಭಾವ ಆ ತಾತ್ಸಾರ ನೋಟದಲ್ಲಿ ಒಡೆದು ಕಾಣುತ್ತಿತ್ತು. ಅಂತೂ ಸಂಭಾಷಣೆಯನ್ನು ಸಮರ್ಪಕವಾಗಿಯೆ ಮುಗಿಸಿದೆನೆಂಬ ತೃಪ್ತಿ ಸನಾತನಿಗಳದಾಯಿತು. ಕ್ರಾಂತಿ ಪಕ್ಷದ ವೀರ ನಾಯಕ ಮಾತ್ರ ತನ್ನ ಚೇಲರ ಮುಖಂಡನ ಕಿವಿಯಲ್ಲಿ ಏನನ್ನೊ ಭುಜ ಕುಣಿಸುತ್ತಾ, ಕಣ್ಣು ಹಾರಿಸುತ್ತಾ ಹೇಳಿ ಗಂಭೀರವಾಗಿ ನಗುತ್ತಿದ್ದ. ಚೇಲರ ಮುಖಂಡ ಉತ್ಸುಕರಾಗಿದ್ದ ಚೇಲರಿಗೆ ಸ್ವಾರಸ್ಯವೇನೆಂಬುದನ್ನು ತಿಳಿಸುವುದರಲ್ಲಿದ್ದ. ಆದರೆ ಅಷ್ಟರಲ್ಲೆ ಕೂಗು ಗಂಟೆಯ ಶಬ್ದ ಕೇಳಿಬಂತು. ನಿಶ್ಶಬ್ದ ನೆಲೆಸಿತು.

ಎಲ್ಲರ ದೃಷ್ಟಿಯೂ ನ್ಯಾಯಾಧೀಶರ ಕಡೆ ಕೇಂದ್ರೀಕೃತವಾಯಿತು.

* * * *

"ಅಪರಾಧಿಯು ಹೇಳಿಕೆಯನ್ನು ಕೇಳಲು ನಾವು ಸಿದ್ಧರಿದ್ದೇವೆ" **ಎಂದು ಎರಡನೆಯ ಬಾರಿ ಹೇಳುತ್ತಾ** ನ್ಯಾಯಾಧೀಶರು ಅಪರಾಧಿಯ

ಕಡೆ ಅರ್ಥಪೂರಿತವಾದ ದೃಷ್ಟಿಯನ್ನು ಬೀರಿದರು.

ಅಪರಾಧಿ ಒಮ್ಮೆ ಸುತ್ತಲೂ ನೋಡಿ ಹತಾತ್ತಾಗಿ ಮಾತನಾಡಿದ:- "ಹು....(ನಿಟ್ಟುಸಿರು ಬಿಡುತ್ತಾ) ನನ್ನ ನಾಲಗೆಯುವರ್ಗೂ ಏನನ್ನಾದರೂ ಬಿಟ್ಟಿರುವಿರೇನು?........ಇಲ್ಲ........ಇಲ್ಲ....ಬರೀ ಭ್ರಾಂತು.... ('ಪಬ್ಲಿಕ್ ಪ್ರಾಸಿಕ್ಯೂಟರ್'ರನ್ನು ಸೂಚಿಸುತ್ತಾ) ನನ್ನ ಪರವಾಗಿ ಅವರೇ ಎಲ್ಲಾ ಮನ ನಾಟುವಂತೆ ಹೇಳಿಬಿಟ್ಟಿದ್ದಾರಲ್ಲಾ....ಅದಕ್ಕೆ ಎಲ್ಲಾ ಚಪ್ಪಾಳೆಯ್ಮೇಲೆ ಚಪ್ಪಾಳೆ ಬಡಿದದ್ದೂ ಆಯಿತಲ್ಲಾ....ನನ್ನನ್ನು ಅವರು ನನಗಿಂತ ಚೆನ್ನಾಗಿ ತಿಳಿದಿದ್ದಾರೊ ಏನೊ........" ಅವನ ಮಾತು ಬಿರುಸಾಗಿದ್ದರೂ, ಜೋರಾಗಿದ್ದರೂ ಅದರಲ್ಲಿ ಬೆಂದ ಹೃದಯದ ನೊಂದ ದನಿಯೊಂದು ಯಾರ ಅರಿವಿಗೂ ಬಾರದೆಯೇ ಮಿಡಿಯುತ್ತಿತ್ತು.

ನ್ಯಾಯಾಧೀಶರು ಕೂಗುಗಂಟೆಯನ್ನು ತಟ್ಟಿ ಹೇಳಿದರು— "ವಿಷಯಕ್ಕೆ ಸಂಬಂಧಿಸದ ವಿಷಯ ಕೂಡದು....ನಿನ್ನ ಪರವಾಗಿ ಏನನ್ನಾದರೂ ಹೇಳಿಕೆ ಕೊಡುವೆಯಾದರೆ ಕೇಳಲು ನಾವು ಸಿದ್ಧರಿದ್ದೇವೆ."

"ಏನಾದರೂ ಇದ್ದರೆ ತಾನೆ ಹೇಳಿಕೆ ಕೊಡುವುದಕ್ಕೆ", "ಅವನನ್ನು ಕೇಳುವುದೇನು, ನೇರವಾಗಿ ಮರಣ ದಂಡನೆ ವಿಧಿಸುವುದು ತಾನೆ", "ಮಾಡೋದು ಅಂಥಾ ನೀಚ ಕಾರ್ಯವಾದ್ರೂ ಸೋಗು ಹಾಕೋದು, ಅಭಿನಯ ಮಾಡೋದು ನೋಡಿದ್ರಾ....ಛೆ!" ಹೀಗೇ ಅನೇಕ ರೀತಿಯಲ್ಲಿ ನೆರೆದಿದ್ದ ಜನ ಅಲ್ಲಲ್ಲಿ ಆಡಿಕೊಳ್ಳ ಹತ್ತಿದರು. ಕೂಗುಗಂಟೆ ಕೇಳಿದೊಡನೆಯೆ ನಿಶ್ಶಬ್ದ ನೆಲೆಸಿತು.

ಅಪರಾಧಿ ಮಾತನ್ನು ಮುಂದುವರಿಸಿದ:—"ಹೃದಯ ಎನ್ನುತ್ತಾರೆ...ಆತ್ಮ ಎಂದು ಕೆಲವರು ಸಾಧಿಸುತ್ತಾರೆ....ನನ್ನ ಪಾಲಿಗೆ ಅದು ಈ ಚರ್ಮದ ಹೊದಿಕೆಯಲ್ಲಿ ಎಲ್ಲಿ ಅಡಗಿದೆಯೊ ತಿಳಿಯದು,....ಅದಕ್ಕೆ (ತನ್ನ ಉಡುಪನ್ನು ಸೂಚಿಸುತ್ತಾ) ಈ ಉಡಿಗೆ ತೊಡಿಗೆ ಇಲ್ಲವೆಂದೇ ನನ್ನ ನಂಬಿಕೆ....ಹು....ಅದರ ಛಾಯಾ ಚಿತ್ರವನ್ನು ತೆಗೆಯಲೂ ಅಸಾಧ್ಯ....ಆದರೆ ಅದನ್ನು ತೋರಿಸುವುದ್ಹೇಗೆ?....ಇಲ್ಲ, ಇಲ್ಲ....ನೀರು

ಗುಳ್ಳೆಯಂತಿರುವ ಈ ನನ್ನ ದೇಹಕ್ಕಿಂತಲೂ ಮಿಗಿಲಾದ, ಅಮರವಾದ ಆತ್ಮವನ್ನು ನಿಮ್ಮ ಮುಂದೆ ತೋರುವ ಅಧಿಕಾರವಾದರೂ ನನಗೆಲ್ಲಿಯದು!........" ಎಂದು ತಲೆತಗ್ಗಿಸಿ ಇನ್ನದಕ್ಕಿದ್ದಂತೆ ಮಾತನ್ನು ನಿಲ್ಲಿಸಿ ಅಂತರ್ಮುಖಿಯಾದ. ಆಗ ಅವನ ದೇಹವನ್ನೆಲ್ಲಾ ಮಿಂಚಿನ ಬಳ್ಳಿಯಂತೆ ಆವರಿಸಿದ ನೋವು ಅವನೊಬ್ಬನದು ಮಾತ್ರ ಆಯಿತು. ಉಳಿದವರು ಯಾರಿಗೂ ಅದರ ವಾಸನೆ ಕೂಡ ತಗುಲಲಿಲ್ಲ.

* * * *

ಅವನ ಮೇಲೆ ಜನ ಎಳೆದಿದ್ದ ಪರದೆ ಅಷ್ಟು ಬಿಗಿಯಾಗಿತ್ತು. ಅಲ್ಲದೆ 'ಪಬ್ಲಿಕ್ ಪ್ರಾಸಿಕ್ಯೂಟರ್'ರೇ ಮುಂತಾದ ಪ್ರತಿಭಾಶಾಲಿಗಳು ಆ ಪರದೆಯನ್ನು ನೆರಿಗೆ ನೆರಿಗೆಯಾಗಿ ಹಿಡಿದು ಜನರ ಮುಂದೆ ಮನ ಮೆಚ್ಚುವಂತೆ, ಕಳೆಕಟ್ಟುವಂತೆ ಎಳೆದು ಕಟ್ಟಿದ್ದರು. ಎಲ್ಲರೂ ಆ ಪರದೆಯನ್ನು ನೋಡುವವರೆ! ಅದರ ಹಿಂದೆ ಹೋಗಿ ತಡುಕಬಲ್ಲ ಧೈರ್ಯ ಅವರಿಗೆ ಇರಲಿಲ್ಲವೊ ಏನೊ. ಒಬ್ಬೊಬ್ಬರು ಒಂದೊಂದು ಪರದೆಯನ್ನು, ಮುಖವಾಡವನ್ನು ಹಾಕಿಕೊಂಡು ಅದರ ಮುಚ್ಚಿನಲ್ಲೆ ತಮ್ಮ ತಮ್ಮ ಮುಖವನ್ನು ಮರೆಸಿಕೊಂಡು ಜೀವನ ಸಾಗಿಸುತ್ತಿದ್ದುದರಿಂದ ಪರದೆಯ ಹಿಂದೆ ಹೋಗಿ ತಡುಕಲು ಅವರು ಅಂಜುತ್ತಿದ್ದರೊ ಏನೊ! ಮುಖವಾಡ ಹಾಕಿಕೊಳ್ಳದಿದ್ದ ಖಾಲಿ ಜನರು, ಮುಖವಾಡ ಹಾಕಿದ್ದ ಧಡೂತಿ ಜನರ ಮುಖವನ್ನೇ ನಿಜವಾದ ಮುಖವೆಂದು ಭ್ರಮಿಸಿ, ಅವರ ಭಾರವನ್ನು ವಾಹನಗಳಂತೆ ಹೊರುತ್ತಿದ್ದರೂ ಇದ್ದಿರಬಹುದು. ಒಳ್ಳೆ ಹಗಲಿನಲ್ಲಿ ದರೋಡೆ ಮಾಡುವುದಕ್ಕೆ ಹೋಗುತ್ತಿರುವ ಕಳ್ಳನಿಗೆ ಅವನು ಕಳ್ಳತನ ಮಾಡುವುದಕ್ಕೆ ಹೋಗುತ್ತಿರುವ ಜಾಗ ಇಷ್ಟೇ ದೂರವಿದೆ ಎಂದು ಮೈಲಿಗಲ್ಲು ನಿರ್ವಂಚನೆಯಿಂದ ಗೊತ್ತುಮಾಡಿ ಕೊಟ್ಟಂತೆ! ಅಲ್ಲದೆ ಮುಖವಾಡದ ಮರ್ಮ ತಿಳಿದಿದ್ದ ಹಲಕೆಲವು ಜನ ಅದನ್ನು ಹೊರಗೆ ಹಾಕದಿರುವುದರಿಂದಲೆ ತಮ್ಮ ಜೀವನವನ್ನು ಸಾಗಿಸಿಕೊಂಡು ತಾವೂ ಧಡೂತಿ ಜನರಾಗುತ್ತಿದ್ದರೊ ಏನೊ! ಪಾಪ ನಿಸ್ಸಹಾಯತೆಯ ಪರಮಾವಧಿ! ಅಥವಾ ಲೌಕಿಕವೊ!

ಅಂತೂ ಇಂತೂ ಅಂತ ಮಿಂಚಿಹೋದ ಮೇಲೆ ಏನೇನೋ ಗಾದೆಗಳನ್ನು ಕೇಳಿ ಸಮಾಧಾನ ತಂದುಕೊಂಡಂತೆ, ಅಂತೂ ಇಂತೂ ಆ ಅಪರಾಧಿಯ ಮುಖವನ್ನು ಯಾರೂ ನೋಡಲೇ ಇಲ್ಲ.

* * * *

ಅಪರಾಧಿ ತಲೆಯನ್ನು ತಗ್ಗಿಸಿದ್ದೆ ತಡ, ಅನೇಕರು ಅವನನ್ನು ನಾನಾರೀತಿಯಿಂದ ಅಪಹಾಸ್ಯಮಾಡುತ್ತಾ ತಲೆಗೊಂದೊಂದು ಮಾತನಾಡಲು ಉಪಕ್ರಮಿಸಿದರು. ಅದನ್ನೇ ಕೇಳುತ್ತಾ, ನೋಡುತ್ತಾ, ನ್ಯಾಯಾಧೀಶರು ಕೂಗುಗಂಟೆಯನ್ನೂ ತಟ್ಟದೆ, ಮುಖದ ಮೇಲೆ ವಿಚಾರಮುದ್ರೆಯನ್ನು ತಾಳಿದರು. ಅಲ್ಲಲ್ಲಿ ಯಾರಾವರೂ ಅಪರಾಧಿಯ ವಿಷಯದಲ್ಲಿ ಸೂಕ್ಷ್ಮವಾಗಿ ಸಂತಾಪ ಸೂಚಿಸಿದರೂ ಸಾಕು, ಜನ ಅವರನ್ನು ಮುತ್ತಿ, ಗುಲ್ಲೆಬ್ಬಿಸಿ ಅವರ ನಾಲಿಗೆಗಳನ್ನು ಮುಡಿಸಿಬಿಡುತ್ತಿದ್ದರು.

ತರುಣ ಉತ್ಸಾಹಿಯ ಪಕ್ಕದಲ್ಲಿದ್ದ ಲಾಯರು ಬಾಡಿದ್ದ ತಮ್ಮ ಮುಖವನ್ನು ಹೊರಲಾರದೆ ಹೊತ್ತುಕೊಂಡು, ನ್ಯಾಯಾಸ್ಥಾನವನ್ನೆಲ್ಲ ಶೂನ್ಯದೃಷ್ಟಿಯಿಂದ ನೋಡುತ್ತಿದ್ದರು. ಭೀಕರ ಕತ್ತಲು ಕವಿದಿದ್ದ ನಡುರಾತ್ರಿಯಲ್ಲಿ, ಕಾಣದ ಕಾಲುದಾರಿಯೊಂದರಲ್ಲಿ, ನಡೆದುಹೋಗುತ್ತಿದ್ದ ಪ್ರಯಾಣಿಕ, ಹಠಾತ್ತಾಗಿ ಎದುರುಗಡೆ ಮಿಣುಕುಮಿಣುಕು ದೀಪವನ್ನು ಹಿಡಿದು ಪ್ರತ್ಯಕ್ಷನಾದ ಕಳ್ಳನ ನೀಡಿದ್ದ ಕೈಗಳಿಗೆ ತನ್ನ ಸರ್ವಸ್ವವನ್ನೂ ಸುರಿದು, ಕತ್ತಲಿನ ಕಡೆ ಶೂನ್ಯದೃಷ್ಟಿ ಬೀರುತ್ತಿರುವಂತಿತ್ತು ಲಾಯರ ಮುಖಭಾವ.

ಲಾಯರ ಹತ್ತಿರವೆ, ಹತ್ತುಮಾರು ಹಿಂದೆಯೇ ನಿಂತಿದ್ದ, ಸೊಗಸಾದ ಉಡುಪನ್ನು ಧರಿಸಿದ್ದ ವೇದಾಂತದ ಪ್ರಚಂಡ 'ಪ್ರೊಫೆಸರ್'ರು ಬಾಯೊಳಗಿದ್ದ ಚುಟ್ಟಾವನ್ನು ಕೈಗೆ ತೆಗೆದುಕೊಳ್ಳುತ್ತಾ, ಷರಾಯಿಯ ಜೋಬಿನೊಳಗೆ ಠೀವಿಯಿಂದ ಕೈಯನ್ನು ಬಿಡುತ್ತಾ, ನೆರೆಯ ಮನುಷ್ಯನ ಕಡೆ ಗತ್ತಿನಿಂದ ಮುಖವನ್ನು ತಿರುಗಿಸಿದರು. ಪ್ರಚಂಡ 'ಪ್ರೊಫೆಸರ್'ರು ತನ್ನ ಕಡೆ ತಿರುಗಿದ್ದೆ ಮಹಾಪ್ರಸಾದವೆಂಬುದನ್ನು ನೆರೆಯ ಮನುಷ್ಯ

ದಿಕ್ಕುಕಾಣದ ಮುಖಭಾವದಿಂದ ವ್ಯಕ್ತಪಡಿಸಿದ. ಏನೋ ಸಾಮಾನ್ಯ ದಿನಚರಿಯ ಯಥಾವಿಧಿಯನ್ನನುಸರಿಸಿ ಧೂಳು ಕವಿದಿರುವ ದೇವರ ಪಟಕ್ಕೆ ನಾಲ್ಕು ಕಾಡುಮಲ್ಲಿಗೆ ಹೂವನ್ನೋ ಅಥವಾ ಕ್ರೋಟನ್ ಎಲೆಗಳನ್ನೋ ಅನ್ಯಮನಸ್ಕನಾಗಿ ಎಸೆದು ಏಳುತ್ತಿರುವ ಭಕ್ತನಿಗೆ, ಅಷ್ಟರ ಮಾತ್ರದಿಂದಲೇ ದೇವರು ಪ್ರತ್ಯಕ್ಷರಾದರೇ (!) ಆಗ ಅವನ ಮುಖದ ಮೇಲೆ ಕಾಣಬಹುದಾದಂಥ ದಿಗ್ಭ್ರಮೆ, ಹಾಗೂ ನಾಚಿಕೆ ಆ ಮನುಷ್ಯನದಾಗಿತ್ತು. 'ಪ್ರೊಫೆಸರ್'ರು ಅವನಕಡೆ ತಿರುಗಿದ್ದು ಮಾತ್ರವಲ್ಲದೆ ಅವನನ್ನು ಕುರಿತು ಕೆಲವು ಮಾತನ್ನೂ ಅಪ್ಪಣೆಕೊಡಿಸಿದರು.

"ಅಲ್ಲಾ....ಆತ್ಮ, ಹೃದಯ, ಈ ದೊಡ್ಡದೊಡ್ಡ ನಿಗೂಢವಾದ ವಿಷಯಗಳ ಮೇಲೆಲ್ಲಾ ಅವನು ಮಾತ್ನಾಡುವುದಕ್ಕೆ ಷುರುಮಾಡ್ಬಿಟ್ನಲ್ಲಾ !........ನೋಡಿ, ಅವನು ಈ ತಿಳೀದಿರೋ ವಿಷಯಗಳ್ಮೇಲೆ ಮಾತ್ನಾಡೋ ಅಷ್ಟು ಹೊತ್ತೂನೂ ನಾನು ಕಿವುಡ್ನಾಗ್ಹೋಗ್ಬಾರ್ದೇಂತ ಅನ್ಸತ್ತೆ."

'ಪ್ರೊಫೆಸರ್'ರು ತನ್ನಕಡೆ ತಿರುಗಿದ್ದೆ ಮಹಾಪ್ರಸಾದವೆಂದುಕೊಂಡು ದಿಗ್ಭ್ರಾಂತನಾಗಿದ್ದ ನೆರೆಯ ಮನುಷ್ಯ, ಅವರು ತನ್ನನ್ನು ಕುರಿತು ಮಾತನಾಡಿದುದನ್ನು ಕೇಳಿ, ಮದುಮಗನ ಮೊದಲ ಮಾತುಗಳನ್ನು ಕೇಳಿ ಪುಟ್ಟ ಮದುಮಗಳು ಲಜ್ಜೆಯಿಂದ ನಸುಗೆಂಪಾದಂತೆ, ಅವನು ಸಂಕೋಚದಿಂದ ಕೆಂಪೇರಿದ. ಆದರೆ ಅಲ್ಪಾವಕಾಶದಲ್ಲೆ, ತನ್ನನ್ನು ತಾನೇ ಸುದಾರಿಸಿಕೊಂಡು ಅವನು, "ಅಲ್ವೇ ಮತ್ತೆ.... ನಮ್ಮಂಥೋರ್ಗೇ ಅವನ ಮಾತು ಅಷ್ಟು ಅಸಹ್ಯವಾಗಿ ಕಾಣ್ತಾ ಇರ್ಬೇಕಾದ್ರೆ ಇನ್ನು ತಮ್ಮಂಥಾ ಜ್ಞಾನಯೋಗಿಗಳು, ಅದನ್ನು ಕೇಳ್ತಾ ನಿಂತಿರೋದೇ ನಮ್ಮ ಅದೃಷ್ಟ ಅನ್ಸತ್ತೆ" ಎಂದು, ತಾನು ಆಡಬೇಕೆಂದಿದ್ದ ಮಾತುಗಳನ್ನು ಯಾವ ಅಡಚಣೆಯೂ ಇಲ್ಲದೆ ಆಡಿಬಿಟ್ಟಿದ್ದಕ್ಕಾಗಿ ನಗುಮುಖನಾದ.

'ಪ್ರೊಫೆಸರ್'ರು ಚುಟ್ಟಾವನ್ನು ಬಾಯಲ್ಲಿಟ್ಟುಕೊಂಡು, ಹಾಗೆಯೇ ಮಾತನ್ನು ಮುಂದುವರಿಸಿದರು—"ಅಲ್ಲಾ, ವಿಷ್ಯಕ್ಕೆ

ಹೇಳ್ತೀನಿ ನೋಡಿ.... ಮೊನ್ನೆ ವಿಶ್ವವಿದ್ಯಾನಿಲಯದ ಸಂಘದಲ್ಲಿ 'ಆತ್ಮ'ದ ವಿಷಯ್ವಾಗಿ ನನ್ನ ಭಾಷಣ ಇಟ್ಕೊಂಡಿದ್ರು.... ಬರೇ ಪೀಠಿಕೇಗೇ ಅವತ್ತಿನ ಮೂರು ಘಂಟೇನೂ ಕಳ್ದ್ಹೋಯ್ತು ನೋಡಿ.... ಅನಿವಾರ್ಯ ವಾದ್ದರಿಂದ ವಿಷಯಾನ ನಾಳಿದ್ದಿಗೆ ಹಾಕ್ಕೊಂಡಿದ್ದಾಯ್ತು.... ನಿಗೂಢ ವಾದ ವಿಷಯುಗ್ಳು, ಪೂರೆಪೂರೆಯಾಗಿ ಬಿಚ್ಚಿ ವಿಶದೀಕರಿಸ್ಬೇಕಾದ್ರೆ ಅಷ್ಟೆಲ್ಲಾ ಪ್ರತಿಭೆ ಹಾಗೂ ಕಾಲ ಅವಶ್ಯಕ ಅನ್ನೋದಕ್ಕೆ ಹೇಳ್ದೆ ಅಷ್ಟೆ...." ಅವರ ಮಾತು ಲೀಲಾಜಾಲವಾಗಿ ಸಾಗುತ್ತಿದ್ದುದರಿಂದ, ಎಂದಿನಂತೆ, "ಭಪ ಭಪಾ" ಎಂದು ಮುಂದುವರಿಯುತ್ತಾ, ಅವರ ಬಾಯೊಳಗಿಂದ ತಂಬಾಕಿನ ಸುಗಂಧಮಿಶ್ರವಾದ ತುಂತುರುಗಳು ನೆರೆಯ ಮನುಷ್ಯನ ಮುಖದಮೇಲೆ ತೆರೆತೆರೆಯಾಗಿ ಇಳಿಯುತ್ತಿದ್ದುವು. ನೆರೆಯ ಮನುಷ್ಯ ಮಾತ್ರ ಅದನ್ನೇ ಪರಮ ಪ್ರಸಾದವೆಂದುಕೊಂಡು, ಇನ್ನೂ ಹತ್ತಿರ ಸರಿದು, ಸ್ವಲ್ಪ ಸರಾಗವಾಗಿಯೇ ನಾಲಿಗೆಯನ್ನು ಚಾಚಿ, ಮುಖಕೊಟ್ಟು, "ಓಹೋ.... ನಾಳಿದ್ದು ಇದ್ಯೇನು ಉಪನ್ಯಾಸ.... ಎಷ್ಟು ಹೊತ್ತಿಗೆ ಅಂತ ಹೇಳೋಣವಾದ್ರೆ" ಎನ್ನುತ್ತಾ ಕಿಸೆಯಿಂದ ಒಂದು 'ಡೈರಿ'ಯನ್ನು ತೆರೆದ.

'ಪ್ರೊಫೆಸರ್'ರು ಅತಿ ಆತುರದಿಂದ "ಆರು ಘಂ...." ಎನ್ನಲು ಪ್ರಯತ್ನಿಸಿದುದರಿಂದ—ಮೊದಲೇ 'ಭಪ ಭಪಾ' ಎಂದು ಮಾತ ನಾಡುವ ಸ್ವಭಾವ—ಸರಕ್ಕನೆ ಅವರ ಕಟ್ಟಿಸಿದ್ದ ಹಲ್ಲಿನ ಸಾಲು ಚುಟ್ಟಾ ಸಮೇತವಾಗಿ ಅವರ ಬಾಯಿಂದ ಕುಸಿದು ಇಳಿಮುಖವಾಯಿತು. ನೆರೆಯ ಮನುಷ್ಯ ಅದನ್ನು ಸಕಾಲದಲ್ಲಿ ಗಮನಿಸಿದುದರಿಂದ, ಕ್ರಿಕೆಟ್ ಆಟದಲ್ಲಿ 'ಕ್ಯಾಚ'ನ್ನು ಹಿಡಿಯುವುದಕ್ಕೆ ಹೆಸರಾಗಿದ್ದ ಅವನು, 'ಡೈರಿ'ಯನ್ನು ಬಾಯಲ್ಲಿ ಕಚ್ಚಿಕೊಂಡು, ಯಂತ್ರದಂತೆ ಕೈ ಒಡ್ಡಿದ. ಆದರೇನು! ಕ್ರಿಕೆಟ್ ಎಷ್ಟೇ ಆಗಲಿ ಅದೃಷ್ಟದ ಆಟ ಅಲ್ಲವೆ! ಅವನ ಕೈಗೆ ಚುಟ್ಟ ಮಾತ್ರ ಸಿಕ್ಕಿತು; ಹಲ್ಲಿನ ಸಾಲು 'ಮಿಸ್' ಆಯಿತು. ತಕ್ಷಣ ಅವನು ಅನಾಮತ್ತಾಗಿ ಪಾತಾಳಗರಡಿಯಂತೆ ನೆಲಕ್ಕೆ ಕುಸಿದು, ಒಂದೇ ನಿಮಿಷದಲ್ಲಿ 'ಪ್ರೊಫೆಸರ್'ರ ಹಲ್ಲು ಸಾಲಿನ ವರ್ಸೆ ಮೇಲಿದ್ದ.

ಕೂಡಲೆ ಕಿಸೆಯಿಂದ ತನ್ನ ರೇಶ್ಮೆ ಕರವಸ್ತ್ರ ತೆರೆದು ಧೂಳಾಗಿದ್ದ ಆ ಹಲ್ಲು ಸಾಲನ್ನು ಒರಸಿ, ವಿನಯ ಪೂರ್ವಕವಾಗಿ ಎರಡು ಕೈಗಳಿಂದಲೂ ಹಿಡಿದು, 'ಪ್ರೊಫೆಸರ್'ರ ಸ್ವೀಕಾರಕ್ಕಾಗಿ ಅದನ್ನು ಮುಂದೆ ನೀಡಿದ. 'ಪ್ರೊಫೆಸರ್'ರಿಗೆ ಬೋಸ್ಬಾಯಿ ಆಗ್ಹೋಗಿದ್ದುದರಿಂದ, ಅವರ ಉಬ್ಬಿದ್ದ ಕೆನ್ನೆಗಳೂ ನಂದಿಹೋಗಿ, ಅವರು ಅಭ್ಯಾಸವಿಲ್ಲದೆ ರಾಗಿ ಹಿಟ್ಟನ್ನು ನುಂಗುವಂತೆ ಉಗುಳನ್ನು ನುಂಗುತ್ತಾ, ದುಃಖ ಹಾಗೂ ಸಂಕೋಚಕ್ಕೊಳಗಾಗಿದ್ದರು. ಹತ್ತಿರದಲ್ಲಿ ಇದ್ದ ಯುವಕನೊಬ್ಬ ತನ್ನ ಪಕ್ಕದವನೊಡನೆ "ಪ್ರೊಫೆಸರ್ ಎಲ್ರೀ ಕಾಣೋದೆ ಇಲ್ಲ....ಅವರ ಜಾಗ ದಲ್ಲಿ ಯಾವುದೊ ಹ್ಯಾಪೆ ನಿಂತಿದೆ" ಎಂದು ಹೇಳಿದ್ದು ಅವರ ಕಿವಿಗೆ ಬಿದ್ದ ಮೇಲಂತೂ, ಅವರಿಗೆ ಪ್ರಾಣವನ್ನೇ ಕಳೆದುಕೊಂಡಷ್ಟು ದುಃಖ ವಾಯಿತು.

ನೆರೆಯುವವನು ಹಲ್ಲು ಮತ್ತು ಚುಟ್ಟಾಗಳನ್ನು ನೀಡಿದ್ದೇ ತಡ, ಹಸಿದ ಸಿಂಹದಂತೆ ಅವರು ಅದನ್ನು ಸ್ವೀಕರಿಸಿ, ನಗುವ ನೆಪದಿಂದ ಒಮ್ಮೆ ವಿಶಾಲವಾಗಿ ಬಾಯ್ಬಿಟ್ಟು, ಹಲ್ಲು ಸಾಲನ್ನು ಥಟಕ್ಕನೆ ತಗುಲಿಸಿ ಕೊಂಡು, ಗತಿಸಿದ್ದ ಠೀವಿಯನ್ನು ಗಳಿಸಿಕೊಂಡು, "ನಿಮಗೆ ತುಂಬಾ ತೊಂದರೆ ಆಯಿತು............ವಯಸ್ಸಾಗ್ಹೋದ್ಮೇಲೆ ಹೀಗೇ ನೋಡಿ" ಎಂದರು.

"ತೊಂದರೆ ಏನ್ಬಂತು ಸ್ವಾ....ಾ....ಮಿ....ತಾವು ಈ ಇಳಿವಯ ಸ್ನಲ್ಲೂ ಇಷ್ಟು ಘನವಾದ ಸೇವೆಯನ್ನು ನಿರಂತರವಾಗಿ ಸಲ್ಲಿಸುತ್ತಿರುವುದು ನಮ್ಮೆಲ್ಲರ ಅದೃಷ್ಟ....ಆರು ಘಂಟೇಗೆ ಅಲ್ವೇ....ನಾಳಿದ್ದು ಉಪನ್ಯಾಸ?" ಎಂದು ನೆರೆಯ ಮನುಷ್ಯ ಬಾಯಲ್ಲಿ ಕಚ್ಚಿದ್ದ ಡೈರಿಯನ್ನು ಕೈಗೆ ತೆಗೆದುಕೊಂಡು, ಅದರಲ್ಲಿ ಗುರುತು ಮಾಡಿಕೊಳ್ಳುತ್ತಾ, ಪೂರಾ ಸಲಿಗೆ ಯಿಂದ, ನಾಲಿಗೆ ಬಿಚ್ಚಿ ಮಾತಾಡಿದ.

ಆತ್ಮದ ವಿಷಯವಾಗಿ ಅಪರಾಧಿ ಆಡಿದ ಮಾತುಗಳನ್ನು ಜರೆದು ಮಾತಾಡುತ್ತಾ, 'ಪ್ರೊಫೆಸರ್'ರು ತಮ್ಮ ಉಪನ್ಯಾಸದ ಮಹತ್ವವನ್ನೂ ಮತ್ತು ಪೀಠಿಕೆಯ ಹಿರಿಮೆಯನ್ನೂ ವಿವರಿಸಿದವರೆವಿಗೂ ಮುಂದಿದ್ದ

ಲಾಯರು ಆಲೈಸಿದರು. ಆ ಮಾತುಗಳಲ್ಲಿ ಅವರಿಗೆ ಅಷ್ಟೇನೂ ವಿಶ್ವಾಸ ಹುಟ್ಟಲಿಲ್ಲವೆಂದು ಕಾಣುತ್ತೆ, ಅವರು ನೆರೆಯ ತರುಣನನ್ನು ಕುರಿತು, "ಪೀಠಿಕೆಯಂತೆ, ಉಪನ್ಯಾಸವಂತೆ, ಸಮಯಾಸಮಯದ ಪರಿಜ್ಞಾನವಿಲ್ಲದೆ ಮಾತ್ನಾಡ್ತಾ ಇದಾರಲ್ಲಾ ನೋಡಿದ್ರಾ ಆ ಹಿಂದಿರು ...ಇವ್ರೇ (ಅಪರಾಧಿಯನ್ನು ಸೂಚಿಸುತ್ತಾ) ಆ ಸ್ಥಾನದಲ್ಲಿರೋದ್ದಿದ್ದರೆ ಆಗ ಇವ್ರ ಪೀಠಿಕೆ, ಉಪನ್ಯಾಸ ಎಲ್ಲಾ ಈಚೆಗ್ಬರೋದು" ಎಂದರು.

ತರುಣ ಉತ್ತರವಾಗಿ ಲಾಯರ ಕಿವಿಯಲ್ಲಿ ಪಿಸುಗುಟ್ಟಿದ— "ಅವ್ರು ನಮ್ಮ ಪ್ರಚಂಡ ಪ್ರೊಫೆಸರ್‌ರು."

"ಒಳ್ಳೇ ಪ್ರಚಂಡತನ ಕಾಣ್ರೀ ...ವಿಚಾರ ದೃಷ್ಟಿಯಿಂದ ನೋಡ್ರೀ ಅಂದ್ರೇ" ಎಂದು ಲಾಯರು ಸಿಟ್ಟಿನಿಂದ ಹೇಳಿದರು.

"ಒಳ್ಳೇ ಮಾತಾಡ್ತೀರಿ ಸ್ವಾಮಿ....ಅವ್ರು ಆತ್ಮದ ವಿಷಯ್ವಾಗಿ ಪ್ರಪಂಚಕ್ಕೇ ಅರ್ಥಕೋಶ ಇದ್ದ್ಹಾಗಿದಾರೆ....ಅಂಥೋರ್‌ವಿಷಯ್ದಲ್ಲಿ ಎಲ್ಲಿ ಬಂತು ಸ್ವಾಮಿ ಚರ್ಚೆ ಅನ್ನೋದು....ಏನು ನಮ್ನಿಮ್ಮ ವಿಷಯ ಕೆಟ್ಹೋಯ್ತು ಕಳ್ಸಿ ಆಗೋಕ್ಕೆ........ಮೊನ್ನೆತಾನೆ ಪ್ರಪಂಚಾನೆಲ್ಲಾ ಸುತ್ಕೊಂಡು ಜ್ಞಾನ ಜ್ಯೋತೀನ ಬೆಳಗಿ ಬಂದಿದಾರೆ ಅವ್ರು. ಸೂರ್ಯ ಪೂರ್ವದಲ್ಲಿ ಹುಟ್ಟಿ ಪಶ್ಚಿಮ್ದಲ್ಲಿ ಮುಳುಗ್ತಾನೆ ಅನ್ನೋ ವಿಷಯ್ದಲ್ಲಿ ಎಲ್ಲೀ ಚರ್ಚೆ ಸ್ವಾಮಿ." ಎಂದು ಹಾಲು ಖೋವ ತಿನ್ನೋ ಅಷ್ಟು ಸಂಗವಾಗಿ ಹೇಳಿದ ತರುಣ ಉತ್ಸಾಹಿ.

ಲಾಯರು, "ಛಿ" ಎಂದವರೆ ಮುಖವನ್ನು ಬೇರೆ ಕಡೆಗೆ ತಿರುಗಿಸಿಬಿಟ್ಟರು. ಆ ಯುವಕನ ಹತ್ತಿರ ಮಾತನಾಡುವುದು ತಮಗೆ ಕ್ಷೇಮವಲ್ಲ ಎಂಬುದನ್ನು ಹಿಂದೆಯೆ ನಿರ್ಧರಿಸಿದ್ದರೂ, ಮತ್ತೊಂದು ಬಾರಿ ಅವನೊಡನೆ ಮಾತು ಬೆಳೆಸಿ, ಕೈ ತೋರಿಸಿ ಅನಿಷ್ಟ ಅನ್ನಿಸ್ಕೊಳ್ಳಬೇಕಾಗಿ ಬಂದಿದ್ದಕ್ಕಾಗಿ ಲಾಯರು ತಮ್ಮಲ್ಲೇ ಮರುಗಿದರು. ಮತ್ತೊಮ್ಮೆ, ಆಕಾಶ ಕಳಚಿಬಿದ್ದರೂ, ಆ ಯುವಕನ ಮುಖ ಕೂಡ ನೋಡುವುದಿಲ್ಲವೆಂದು ಅವರಾಣೆ ಇಟ್ಟುಕೊಂಡು ಸಂಕಲ್ಪ ಮಾಡಿ

ಕೊಂಡರು.

*    *    *    *

ನ್ಯಾಯಾಧೀಶರು ಕೂಗು ಗಂಟೆ ತಟ್ಟಿದರು. ಸರಿ, ಪೂರ್ಣ ನಿಶ್ಯಬ್ದ. ಅಪರಾಧಿಯನ್ನೇ ದಿಟ್ಟಿಸುತ್ತಾ ನ್ಯಾಯಾಧೀಶರು, "ಇನ್ನು ಹದಿನೈದು ನಿಮಿಷಗಳ ಕಾಲಾವಕಾಶ ಮಾತ್ರ ಉಳಿದಿದೆ. ನಿನ್ನ ಹೇಳಿಕೆಯನ್ನು ಅಷ್ಟರಲ್ಲೇ ನೇರವಾಗಿ ಕೊಡುವುದು ಕ್ಷೇಮವೆಂದು ಹೇಳಲು ನಾವು ಅಪೇಕ್ಷಿಸುತ್ತೇವೆ." ಎಂದರು.

ಅಪರಾಧಿ ಮಾತನ್ನು ಮುಂದುವರಿಸುತ್ತಾ, "ನನ್ನ ಮಾತನ್ನು ನಂಬುವುದು, ಬಿಡುವುದು ನಿಮ್ಮನ್ನು ಸೇರಿದ್ದು....ನೀವು ನಂಬುವುದಿಲ್ಲವೆಂದೂ ನನಗೆ ಗೊತ್ತು....ಆದರೂ ಸತ್ಯಾಂಶವನ್ನು ಹೊರಗೆಡಹುವುದು ನನ್ನ ಕರ್ತವ್ಯ...ನಂಬದೆ ಶಿಕ್ಷೆ ಕೊಟ್ಟಲ್ಲಿ ಪಾಪದ ಹೊರೆ ನಿಮ್ಮ ಮೇಲೇ" ಎಂದು ಹೇಳಿ 'ಪಬ್ಲಿಕ್ ಪ್ರಾಸಿಕ್ಯೂಟರ್' ರನ್ನೂ ಮತ್ತು ನ್ಯಾಯಾಧೀಶರನ್ನೂ ದಿಟ್ಟಿಸಿ ನೋಡಿದ. ಯಾರ ದೃಷ್ಟಿಗೂ ಬಾರದಂತೆಯೇ ಅವನ ಕಣ್ಣುಗಳಿಂದ ನೀರು ಹನಿದು ಅವನ ದೃಷ್ಟಿ ಮಂಜಾಯಿತು. ಕೆನ್ನೆಯ ಮೇಲಿಂದ ಉರುಳಿ ನೆಲದ ಮೇಲೆ ಪಳ ಪಳ ಬಿದ್ದ ಅವನ ಕಣ್ಣೀರನ್ನು ಅವನೊಬ್ಬನೇ ನೋಡುವಂತಾಯ್ತು.

ನ್ಯಾಯಾಧೀಶರು ಕೂಗು ಗಂಟೆ ತಟ್ಟದೆ ತಟಸ್ಥರಾಗಿದ್ದುದರಿಂದ ಜನರೆಲ್ಲಾ ಆಡಿಕೊಳ್ಳಲು ಅವಕಾಶವಾಯಿತು. ಅಪರಾಧಿಯನ್ನು ಕುರಿತು ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಹಳಿಯುತ್ತಿದ್ದರು. 'ಪಬ್ಲಿಕ್ ಪ್ರಾಸಿಕ್ಯೂಟರ್'ರ ಮುಖದಲ್ಲೂ, ನ್ಯಾಯಾಧೀಶರ ಮುಖದಲ್ಲೂ ಎದ್ದು ಕಾಣುತ್ತಿದ್ದ ಜಿಗುಪ್ಸೆಯಿಂದಲೇ ಕೆಲವರು ಅಪರಾಧಿಯನ್ನು ಅಳೆಯುತ್ತಿದ್ದರು; ಅಳೆದಳೆದು ಹಳಿಯುತ್ತಿದ್ದರು.

ಆ ಅಲ್ಲೋಲ ಕಲ್ಲೋಲದ ಮಧ್ಯೆಯೇ ಅಪರಾಧಿ ಚೇತರಿಸಿಕೊಂಡು ತನ್ನ ಮಾತನ್ನು ಮುಂದುವರಿಸಿದ. ನ್ಯಾಯಾಧೀಶರು ಕೂಗು ಗಂಟೆಯನ್ನು ತಟ್ಟದೆ ಸುಮ್ಮನಿದ್ದುದರಿಂದ ಜನರ ಮಾತೂ ನಿಂತಿರಲಿಲ್ಲ. ಅಪರಾಧಿಯ ಮಾತು ಅಸ್ಪಷ್ಟವಾಗಿ ಕೇಳಬರುತ್ತಿತ್ತು. ಅಲ್ಲದೆ, ಅದನ್ನು

ಕೇಳುವ ಶ್ರದ್ಧೆಯೂ ಜನರಿಗೆ ಇಲ್ಲದಿದ್ದುದರಿಂದ, ಅವನ ಮಾತುಗಳು ಗಾಳಿ ಪಾಲಾದುವೆಂದೇ ಹೇಳಬಹುದಾಗಿತ್ತು.

*　　*　　*　　*

ಅಪರಾಧಿಯ ಹೇಳಿಕೆಯನ್ನು ಆಮೂಲಾಗ್ರವಾಗಿ ಬರೆದಿಡುವ ಕೆಲಸಕ್ಕಾಗಿಯೇ ಮೀಸಲಾಗಿದ್ದ ಗುಮಾಸ್ತ ಮಾತ್ರ ಅಪರಾಧಿಯ ಪಕ್ಕದಲ್ಲಿ ಕುಳಿತು, ಅವನು ಆಡುತ್ತಿದ್ದ ಮಾತುಗಳಿಗೆ ತನ್ನ ಕಿವಿಯನ್ನು ಒಡ್ಡಿ, ಕಾಗದದ ಮೇಲೆ ಕೈ ಓಡಿಸುತ್ತಿದ್ದ. ಅವನ ಮನಸ್ಸು ಮಾತ್ರ ಪೀಕಲಾಟದಲ್ಲಿ ಸಿಕ್ಕಿಕೊಂಡು, ಅಂಗತ್ತನಾಗಿ ಬಿದ್ದಿರುವ ಜಿರಳೆಯಂತೆ, ಒದ್ದಾಡುತ್ತಿತ್ತು ಅಂದು ಬೆಳಿಗ್ಗೆ ತಾನೆ ಅವನ ಹೆಂಡತಿ, ಮುಖವನ್ನು ಗಡಿಗೆ ಮಾಡಿಕೊಂಡು, "ಅಯ್ಯೋ ಅಯ್ಯೋ....ನಿಮ್ಜೊತೆ ಇದ್ದು ಉದ್ಧಾರ್ವಾದೆ ನಾನು ...ಒಂದು 'ವಾಕಿಂಗ್ ಸ್ಟಿಕ್ ಬಾರ್ಡರ್' ಸೀರೆ ತಂದ್ಕೊಡೊ ಯೋಗ್ಯತೆ ಇಲ್ಲಾ....ಗಂಡಂತೆ ಗಂಡು!....ಕಳ್ಳ ವಾಸಿ ಕಂಡ್ರಿ ನಿಮ್ಗಿಂತ, ಒಳ್ಳೆ ರಾತ್ರ್ಯೊತ್ನಲ್ಲಿ ಹೇಳಿದ್ರೂ ಸೈ ಅಂದ್ಕೊಂಡು ಬೆಳಕ್ಹರ್ಯೋದ್ರೊಳ್ಗೆ ತಂದ್ಬಿಡ್ತಾನೆ" ಎಂದು ಹೇಳಿ ಅವನ ಗಂಡಸ್ತನವನ್ನೆಲ್ಲಾ ಕಲಕಿ ಬಿಟ್ಟಿದ್ದಳು. ಗುಮಾಸ್ತ ಬರೀತಿದ್ದಾಂಗೆ ಅವನ ಮನಸ್ಸು ಮನೆಯ ಕಡೆ ಓಡಿತು. ಆದರೆ ಬೆಳಿಗ್ಗೆ ಅವನ ಹೆಂಡತಿ ತನ್ನ ಮೈಯನ್ನೇ ಬಿಲ್ಲಾಗಿ ಬಳಸಿಕೊಂಡು ತನ್ನ ಮೇಲೆ ಪ್ರಯೋಗ ಮಾಡಿದ್ದ ಮಾತಿನ ಬಾಣಗಳನ್ನು ನೆನೆದು ಅವನ ಮನಸ್ಸು—ಯಂತ್ರದಂತೆ ಕೆಲಸ ಮಾಡುತ್ತಿದ್ದರೂ, ಮನೆಯವರೆಗೂ ಓಡಿದ ಮನಸ್ಸು—ಮನೆಯ ಒಳಗೆ ಹೋಗುವುದಕ್ಕೆ ಅಂಜಿತು. ಅಲ್ಲದೆ ಹೆಂಡತಿಯ ಆ ಮಾತಿನಲ್ಲಿ, ಅದನ್ನು ಹೇಳಿದ ರೀತಿಯಲ್ಲಿ, ಸಲಿಗೆಗಿಂತ ಸುಲಿಗೆಯೆ ಹೆಚ್ಚಾಗಿತ್ತು. "ಮುಂದೇನಪ್ಪಾ ಗತಿ" ಎಂದುಕೊಳ್ಳುತ್ತಾ ಅವನ ಮನಸ್ಸು ತಲೆ ತಗ್ಗಿಸಿಕೊಂಡು, ಜೋಲು ಮುಖ ಹಾಕಿಕೊಂಡು ಹಿಂತಿರುಗಿ ಅವನನ್ನು ಸೇರಿ ಒಳಗಿನಿಂದಲೆ ಎಚ್ಚರಿಸಿತು :—"ಭಲೆ....ಒಪ್ಪೆ ಕಣೊ!....ಅಲ್ಲಾ ಆ ಖಾಲೀ ಪರ್ಸ್‌ನ ಜೇಬ್ನಲ್ಲಿಟ್ಕೊಂಡಿದ್ರೂನು, ನಿರಾತಂಕವಾಗಿ ಬರೀತಾ ಇದ್ದೀಯಲ್ಲಾ.... ಆನೆ ಸತ್ಬಿದ್ದಿದ್ಯೇನೊ ನಿನ್ಮೈಮೇಲೆ? ಛೆ!....ಕನಸ್ನಲ್ಲೊಗೊಂಡ್ಹೋಗಿ

ಪೊಡ್ತ್ಯೇನೋ ಅಪ್ಪಿಗೆ ವಾಕಿಂಗ್ ಸ್ಟಿಕ್ ಬಾರ್ಡರ್ ಸೀರೇನ ?"

ಗುಮಾಸ್ತ ಬರೆಯುವುದನ್ನು ನಿಲ್ಲಿಸಿ ಡಂಗು ಬಡೆದು ಕುಳಿತ. ಅವನಿಗೆ ಆಗ ವಿಪರೀತ ದುಃಖವಾಯಿತು. "ಅಯ್ಯೋ, ಜೀವಕ್ಕೆ ಸಮಾಧಾನ ತಂದ್ಕೊಳ್ಳೊ ಅಷ್ಟೂ ಅವಕಾಶವಿಲ್ವಲ್ಲಾ.... ಈ ಹಾಳ್ಕೆಲ್ಸಕ್ಕೆಷ್ಟು ...." ಎಂದು ನೊಂದುಕೊಳ್ಳುತ್ತಾ ಒಂದು ಸಲ ನ್ಯಾಯಸ್ಥಾನವನ್ನೆಲ್ಲಾ ನೋಡಿದ. ಜನರೆಲ್ಲಾ ಸ್ವೇಚ್ಛೆಯಲ್ಲಿ ತೊಡಗಿದ್ದನ್ನು ನೋಡಿ ಅವನಿಗೆ ವಿಪರೀತ ರೋಷ ಬಂತು. ಇದ್ದಕ್ಕಿದ್ದಂತೆಯೆ ಅವನಿಗೆ ಏನೋ ಜ್ಞಾನೋದಯವಾದಂತಾಗಿ ತನ್ನಲ್ಲೇ ವಿಚಾರ ಮಾಡಿಕೊಳ್ಳ ತೊಡಗಿದ—"ಎಲಾ, ನ್ಯಾಯಾಸ್ಥಾನದಲ್ಲೆಲ್ಲಾ 'ಹುಚ್ಚು ಗಲಾಟೆ ಇದೆ. ಅಪರಾಧಿ ಮಾತ್ನ ಯಾರೂ ಕೇಳ್ತಾಲೇ ಇಲ್ಲ ...ತೊಗೊ....ನಾನು ಬರ್ದಿದ್ದೇ ವೇದ ವಾಕ್ಯ" ಎಂದಿದ್ದೂನು ತನ್ನ ಕೆಲಸವನ್ನು ಆರಾಮವಾಗಿ ಮಾಡುತ್ತಾ, ಮನಸ್ಸಿನಲ್ಲೇ ತನ್ನ ಖಾಲಿ 'ಪರ್ಸಿಗೂ' ಮತ್ತು 'ವಾಕಿಂಗ್ ಸ್ಟಿಕ್ ಬಾರ್ಡರ್' ಸೀರೆಗೂ ನಡುವೆ ಇದ್ದ ಘೋರವಾದ ಅಂತರವನ್ನು ಭರ್ತಿ ಮಾಡಲು ಲೆಕ್ಕ ಹಾಕುತ್ತಿದ್ದ.

* * * *

ಉಕ್ಕಿ ಬರುತ್ತಿದ್ದ ದುಃಖವನ್ನು ತಡೆದು ಬಿಗಿದ ಕಂಠದಿಂದ ಅಪರಾಧಿ ತಾನು ಆ ಮಗುವನ್ನು ಕಸಿದು ಕೊಲ್ಲುವ ಯೋಚನೆಯನ್ನು ಕನಸಿನಲ್ಲೂ ಎಸಗಲಿಲ್ಲವೆಂದು ಹೇಳಿ, ಇದ್ದಕ್ಕಿದ್ದಂತೆ ಮುಖವನ್ನು ಅಂಗಿಯವರೆಗೆ ತಗ್ಗಿಸಿ, ಥಟ್ಟನೆ ಹಲ್ಲಿನಿಂದ ಒಂದು ಪುಟ್ಟ ಅಂಗಿಯನ್ನು ಕಚ್ಚಿಕೊಂಡು ಆವೇಶದಿಂದ, ಭಾವೋದ್ರೇಕದಿಂದ ಹೇಳಿದ—"ಎಲ್ಲರೂ ಇತ್ತ ನೋಡಿ....(ಗಹಗಹಿಸಿ ನಗುತ್ತಾ) ನನ್ನ ಮಾತನ್ನು ಕೇಳುವುದು ನಿಮಗೆ ಬೇಡವಾಗಿದೆಯೋ ಏನೋ! ಹೇಳಿಕೆ ಕೊಡೆಂದು ಹೇಳಿದ್ದಾದರೂ ಏಕೆ? . . ಹೋಗಲಿ ...ನನ್ನ ಪರಿಶುದ್ಧಾತ್ಮತೆಗೆ (ಚೀರುವ ದನಿಯಲ್ಲಿ) ಇತ್ತ ನೋಡಿ, ಈ ಅಂಗಿಯೇ ಸಾಕ್ಷಿ...ಒಂದು ವರ್ಷದ ಹಿಂದೆ (ಅತಿ ದುಃಖದಿಂದ) ಈ ಸತದೃಷ್ಟ ಕಳೆದುಕೊಂಡ ಪುಟ್ಟ ಕಂದನ ಅಂಗಿ ಇದು.... ಅಪ್ಪ....ಆ ಮುದ್ದು ಮುಖ....ಹು....ಕೇಳಿ, ಕೇಳಿ, ಆ ಕಂದನ ನೆನಪಿ

ನಲ್ಲೇ ಜೀವಿಸುತ್ತಿರುವ ನಾನು, ಅದರಂತೆಯೇ ಕಂಡ ಆ ಕೂಸನ್ನು ಒಮ್ಮೆ ಮುತ್ತಿಡೋಣವೆಂದು ಕೈ ನೀಡಿದೆನೇ ಹೊರತು....ದೇವರಾಣೆ ಇನ್ನಾವ ಯೋಚನೆಯಿಂದಲೂ ಅಲ್ಲ (ಯಾರೂ ತನ್ನ ಮಾತನ್ನು ಆಲೈಸುತ್ತಿಲ್ಲ ವೆಂಬುದನ್ನು ಮನಗಂಡು) ಅಯ್ಯೋ ನೀಚರುಗಳಿರಾ, ನಿಮಗೆ ಹೃದಯ ವೆಲ್ಲಿದೆ....ನಿಮ್ಮೆದುರಿಗೆ ಆ ಪುಟ್ಟ ಕಂದನ ವಿಚಾರವನ್ನು ಹೇಳಿ ನಾನೇಕೆ ಆತ್ಮದ್ರೋಹ ಮಾಡಿಕೊಳ್ಳಲಿ....ಅಯ್ಯೋ ಪಾಪಿಗಳಾ, ಸ್ವಾತಂತ್ರ್ಯದ ಹೆಸರಿನಲ್ಲಿ ಹೃದಯವನ್ನೇ........"

ನ್ಯಾಯಾಧೀಶರು ಕೂಗುಘಂಟೆ ತಟ್ಟಿದ್ದರಿಂದ ಅಪರಾಧಿ ಮಾತನ್ನು ಅಲ್ಲಿಗೇ ಸಾಕುಮಾಡಿ ದುಃಖದಿಂದ ಭಾರವಾಗಿದ್ದ ತನ್ನ ಮುಖ ವನ್ನು ತಗ್ಗಿಸಿದ. ಗುಮಾಸ್ತ ಜೋಲುಮುಖ ಹಾಕಿಕೊಂಡು, ತಾನು ಬರೆದಿದ್ದ ಅಪರಾಧಿಯ ಹೇಳಿಕೆಯನ್ನು ರೂಢಿಯ ಪ್ರಕಾರ ನ್ಯಾಯಾ ಧೀಶರ ಮುಂದಿಟ್ಟು ಹೊರಟ. ತಕ್ಷಣವೆ 'ನ್ಯಾಯ ಚಿರಾಯುವಾಗಲಿ, ನ್ಯಾಯ ಚಿರಾಯುವಾಗಲಿ' ಎಂದು ಘೋಷಿಸುತ್ತಾ ಜನರು ಎದ್ದು ನಿಂತರು. ಅನಂತರ ನ್ಯಾಯಾಧೀಶರು ಎದ್ದುನಿಂತು, ಜನರನ್ನೆಲ್ಲಾ ಒಮ್ಮೆ ನೋಡಿ ಪ್ರಸನ್ನವದನರಾಗಿ ಮೆಲ್ಲನೆ "ಏಕಾಂತಕೋಣೆ"ಗೆ ಹೊರಟರು.

## ೧೦

ಮುಕ್ತಾಯ ಚರ್ಚೆಯಾದಮೇಲೆ ನ್ಯಾಯಾಧೀಶರು ತೀರ್ಪು ಕೊಡುವ ಮುನ್ನ ಹತ್ತು ನಿಮಿಷಗಳ ಕಾಲ "ಏಕಾಂತ ಕೋಣೆ"ಗೆ ಹೋಗಿ ತಮ್ಮಲ್ಲೇ ವಿಚಾರ ಮಾಡಿಕೊಳ್ಳಬೇಕೆಂದು ಅಲ್ಲಿ ಕಾನೂನಿನ ಮೂಲಕ ವಿಧಿಸಲಾಗಿತ್ತು. ಅದಕ್ಕಾಗಿಯೇ ನ್ಯಾಯಾಧೀಶರು ಎದ್ದು ಹೊರಟಿದ್ದು.

ನ್ಯಾಯಾಧೀಶರು ಹೊರಟಿದ್ದೇ ತಡ ನ್ಯಾಯಾಸ್ಥಾನದಲ್ಲಿ ಗಲಾ ಟೆಗೆ ಇಟ್ಟುಕೊಂಡಿತು. ತರುಣರ ಗುಂಪಿನಿಂದ, ತರುಣ ಮುಖಂಡರು ಪತ್ನೀ ಸಮೇತರಾಗಿ ವೇದಿಕೆಯ ಮೇಲೆ ಬಂದು ಜನರಿಗೆ ದರ್ಶನ

ಕೊಡಬೇಕೆಂಬ ಒತ್ತಾಯದ ಕೂಗು ಕೇಳಿಬಂತು. ಜನರೆಲ್ಲಾ ಅದನ್ನು ಅನುಮೋದಿಸಿದ್ದರಿಂದ ಆ ಕೂಗು ನ್ಯಾಯಾಸ್ಥಾನವನ್ನೆಲ್ಲಾ ತುಂಬಿತು.

ಜನರ ಒತ್ತಾಯಕ್ಕೆ ಮನ್ನಣೆ ಕೊಟ್ಟು, ಗಂಡಸರ ಗ್ಯಾಲರಿಯಲ್ಲಿ ಉನ್ನತಾಸನದಲ್ಲಿ ಕುಳಿತಿದ್ದ ತರುಣ ಮುಖಂಡರು ಸುಪ್ರಸನ್ನರಾಗಿ ವೇದಿಕೆಯ ಕಡೆ ವಿನಯಪೂರ್ವಕವಾದ ನಡಿಗೆಗಳನ್ನು ಹಾಕುತ್ತಾ ನಡೆದರು.

ಹೆಂಗಸರ ಗ್ಯಾಲರಿಯಲ್ಲಿ ತಾನೇ ತಾನಾಗಿ ಕುಳಿತಿದ್ದ ತರುಣ ಮುಖಂಡರ ಪತ್ನಿಯನ್ನು ಅಕ್ಕ ಪಕ್ಕದಲ್ಲಿದ್ದ ಮತ್ತು ಹಿಂದು ಮುಂದಿದ್ದ ಹೆಂಗಸರು ವಿಶ್ವಾಸ ಮಿಶ್ರಿತವಾದ ಬಲಾತ್ಕಾರದಿಂದ ವೇದಿಕೆಯ ಕಡೆ ಬೀಳ್ಕೊಟ್ಟರು. ಈ ನಾರೀ ಶಿರೋಮಣಿ ಏಳುತ್ತಲೆ ನ್ಯಾಯಾಸ್ಥಾನದಲ್ಲೆಲ್ಲಾ ಚಪ್ಪಾಳೆ ಕೇಳಿಬಂತು. ಅನಂತರ ಅವಳು ವೇದಿಕೆಯ ಕಡೆ ಕತ್ತನ್ನು ಕೊಂಕಿಸುತ್ತಾ, ಮಂದಿ ತನ್ನ ಸಲುವಾಗಿ ತೋರಿದ ಉತ್ಸಾಹವನ್ನು ನಾಟಕೀಯ ಹಾವಭಾವಗಳಿಂದ ದಕ್ಕಿಸಿಕೊಳ್ಳುತ್ತಾ ನವಿಲಿನಂತೆ ಗತ್ತಿನಿಂದ ಮುಂದೆ ನಡೆದಳು.

ತರುಣ ಮುಖಂಡರು ವೇದಿಕೆಯ ಮೇಲೆ ಪತ್ನೀ ಸಮೇತರಾಗಿ ನಿಂತು ದರ್ಶನವಿತ್ತಿದ್ದೇ ತಡ, ಮಂದಿಯಲ್ಲಿ ಎದ್ದ ಅಸಾಧ್ಯವಾದ ಉತ್ಸಾಹ, ಚಪ್ಪಾಳೆಗಳ ಸುರಿಮಳೆ ಮತ್ತು ಅವಿಚ್ಛಿನ್ನವಾದ ಜೈ ಜೈಕಾರಗಳ ರೂಪವನ್ನು ತಾಳಿತು.

* * * *

ಸನಾತನಿಗಳ ಹಿಂದೆ ನಿಂತಿದ್ದ ಮನುಷ್ಯರೊಬ್ಬರು ನೆರೆಯವರನ್ನು ಕ್ಷುರಿತು, "ಈಕೆ ಸಾಹುಕಾರ್ ರೂಪಾಯಪ್ಪನ ಪತ್ನಿ ಅಲ್ಲವೆ? ಅವರ ಪತ್ನಿ ಎಲ್ಲಿ?" ಎಂದು ವೇದಿಕೆಯ ಕಡೆ ಸೂಚಿಸುತ್ತಾ ಕೇಳಿದರು. ನೆರೆಯವರು, "ರೂಪಾಯಪ್ಪನ್ನ ವಿಚ್ಛೇದನ ಮಾಡ್ಬಿಟ್ಟು ಮುಖಂಡರ್ನ ಈಕೆ ಮದ್ವೆ ಆಗಿ ಆಗಲೇ ಮೂರು ತಿಂಗ್ಳಾಯ್ತಲ್ಲಾ........ತಿಳೀದೇ ನಿಮ್ಗೆ" ಎಂದರು. "ಓಹೊ! ಹಾಗೇನು" ಎನ್ನುತ್ತಾ ಮಾತನ್ನು ಆರಂಭಿಸಿದ್ದ ಮನುಷ್ಯರು ಸುಮ್ಮನಾದರು.

ಸನಾತನಿಗಳ ಕಿವಿಗೂ ಈ ಸಂಭಾಷಣೆ ಮುಟ್ಟಿತು. "ವಿಚ್ಛೇದನ"ದ ಕಾನೂನನ್ನು ಕಿತ್ತೊಗೆಯುವುದೂ ಸನಾತನಿಗಳ, ಅಂದರೆ ಅವರಿಗೆ ಸಂಬಳ ಕೊಡುತ್ತಿದ್ದ ಸನಾತನ ಸಂಘದ, ಕಾರ್ಯ ಚಟುವಟಿಕೆಗಳಲ್ಲಿ ಒಂದಾಗಿತ್ತು. ನ್ಯಾಯವಿಧಾಯಕ ಸಭೆಯ ಪ್ರತಿಯೊಂದು ಅಧಿವೇಶನದಲ್ಲೂ ಸನಾತನಿಗಳು "ವಿಚ್ಛೇದನ"ದ ಕಾನೂನನ್ನು ವಿರೋಧಿಸುವ ಠರಾವನ್ನು ಸಭೆಯ ಮುಂದೆ ಇಡುತ್ತಿದ್ದರು. ಆದರೆ ಅದನ್ನು "ಸೆಕೆಂಡ್" ಮಾಡೋರೂ ಇಲ್ದೆ ಆ ಠರಾವು 'ಓಟಿನ' ಮೆಟ್ಟಿಲನ್ನು ಕೂಡ ಹತ್ತಲಾಗದೆ ಎಡವಿ ಮುಗ್ಗರಿಸುತ್ತಿತ್ತು.

ರೂಪಾಯಪ್ಪನನ್ನು ವಿಚ್ಛೇದನಮಾಡಿ ತರುಣ ಮುಖಂಡರನ್ನು ಆಕೆ ವಿವಾಹವಾದದ್ದು ಎಂಬ ಅಂಶ ಅವರ ಕಿವಿಯಮೇಲೆ ಬೀಳುತ್ತಲೆ ಅವರು "ಶಾಂತಂ ಪಾಪಂ" ಎಂದರು. ಮರುಕ್ಷಣವೆ ಅವರಿಗೆ ಹೆದರಿಕೆಯಾಯಿತು. ಪ್ರಗತಿಗಾಮಿಯಾದ ಆ ರಾಷ್ಟ್ರದಲ್ಲಿ, ಅನುಮೋದಿತವಾಗಿ ಆಚರಣೆಯಲ್ಲಿದ್ದ ಕಾನೂನನ್ನು ಕುರಿತು, ವಿರೋಧ ಟೀಕೆಯನ್ನು, ನ್ಯಾಯವಿಧಾಯಕ ಸಭೆಯೊಳಗೆ ಹೊರತು ಇನ್ನೆಲ್ಲೂ ಮಾಡಕೂಡದೆಂಬ ಕಾನೂನಿತ್ತು. ಹಾಗೆ ಹೊರಗೆ ಟೀಕೆ ಮಾಡಿದಲ್ಲಿ ಕಠಿಣ ಶಿಕ್ಷೆಗೆ ಗುರಿಪಡಿಸುವುದು ಅಲ್ಲಿ ಸರ್ವೆ ಸಾಮಾನ್ಯವಾಗಿತ್ತು. "ಸಾಲದುದಕ್ಕೆ ಕ್ರಾಂತಿಪಕ್ಷದ ವೀರ ನಾಯಕ ಬೇರೆ ಹತ್ತಿರದಲ್ಲೆ ಇದ್ದಾನೆ! ಅವನು ಇದೇ ಅವಕಾಶವನ್ನೇ ಉಪಯೋಗಿಸಿಕೊಂಡು ನನ್ನ ಮೇಲೆ ಬಿದ್ದರೆ!" ಎನ್ನುವ ಯೋಚನೆ ಅವರಿಗೆ ಬಂದ ಮೇಲಂತೂ, ಅವರಲ್ಲಿದ್ದ ಭೀತಿ ತನ್ನದೇ ಆದ ಒಂದು ವ್ಯಕ್ತಿತ್ವವನ್ನು ತಾಳಿ ಅವರ ಕರುಳನ್ನೆ ಮೀಟುವುದಕ್ಕೆ ಷುರು ಮಾಡಿತು. ಆ ಪ್ರಾಣಸಂಕಟದ ನಿಮಿಷಗಳಿಗೆಯಲ್ಲೂ, ಸನಾತನಿಗಳು ವೆಂಕಟರಮಣನನ್ನು ನೆನೆಯುತ್ತಾ, "ಪಾಪ, ಶಾಂತಮೂರ್ತಿಯಂತಿದ್ದಾರೆ, ಶಾಂತ ಪಾಪ, ಶಾಂತ ಪಾಪ" ಎಂದು ವೇದಿಕೆಯ ಮೇಲಿದ್ದ ತರುಣ ಮುಖಂಡರನ್ನು ನೋಡುತ್ತಾ ತಮ್ಮ ಮಾತನ್ನು ಸವರಿಸಿಬಿಟ್ಟರು. ತಮ್ಮ ಮನಸ್ಸಿಗೆ ಪೂರ್ಣ ಸಮಾಧಾನವನ್ನು ತಂದುಕೊಳ್ಳಲೋಸುಗ ಅವರು ಕ್ರಾಂತಿ ಪಕ್ಷದ ವೀರ

ನಾಯಕನ ಮುಖವನ್ನೂ ಒಮ್ಮೆ ಓದಿಬಿಡುವುದೆಂದು ನಿಶ್ಚಯಿಸಿ ಪಕ್ಕಕ್ಕೆ ತಿರುಗಿದರು. ಭಾವ ಸಮಾಧಿಯನ್ನು ಹೊಕ್ಕ ಭಾವ ಯೋಗಿಯಂತೆ, ತನ್ನನ್ನೇ ಮರೆತು ಚಿಂತಾಗ್ರಸ್ತನಾಗಿದ್ದ ವೀರ ನಾಯಕನನ್ನು ನೋಡಿದ ಮೇಲಂತೂ ಸನಾತನಿಗಳು ಸಮಾಧಾನ ಚಿತ್ತರಾಗಿ, ಆ ವಿಚಿತ್ರ ದೈವ ಲೀಲೆಯನ್ನು ಒಳಗೊಳಗೆ ಕೊಂಡಾಡುತ್ತಾ, ನಗುಮುಖರಾಗಿ, ಹರ್ಷ ಸಮಾಧಿಯನ್ನು ಹೊಕ್ಕ ಹರ್ಷ ಯೋಗಿಯಂತೆ ಕಂಡರು!

*   *   *   *

ನ್ಯಾಯಾಧೀಶರು ಹಿಂತಿರುಗುವ ಕಾಲ ಸಮೀಪಿಸುತ್ತಿದ್ದುದರಿಂದ, ತರುಣ ಮುಖಂಡರು ಉಪನ್ಯಾಸದ ಹವ್ಯಾಸಕ್ಕೆ ಹೋಗದೆ, ಅರ್ಥ ಪೂರಿತವಾದ ಮುಖಭಾವ ಹಾಗೂ ನಮಸ್ಕಾರಗಳಿಂದಲೆ ಸಭಿಕರಿಗೆ ದರ್ಶನವಿತ್ತು, ಪತ್ನಿಗೆ ವಾಪಸು ತೆರಳುವಂತೆ ಪಿಸುಮಾತಿನಲ್ಲಿ ಹೇಳಿ, ತಾವೂ ವೇದಿಕೆಯಿಂದ ಕೆಳಗಿಳಿದು ಚಪ್ಪಾಳೆಗಳ ತಾಳಕ್ಕೆ ಸರಿಯಾಗಿ ಕಾಲುಹಾಕುತ್ತಾ ಹೊರಟು ಸ್ವಸ್ಥಾನ ಸ್ಥಾಪಿತರಾದರು.

ತರುಣ ಮುಖಂಡರ ಪತ್ನಿ ತನ್ನ ಸ್ಥಾನಕ್ಕೆ ಹಿಂತಿರುಗಿ ಕುಳಿತಿದ್ದೆ ತಡ, ನ್ಯಾಯಾಧೀಶರು "ಏಕಾಂತ ಕೋಣೆ"ಯಿಂದ ಹೊರಬಂದು ನಡುದಾರಿಯನ್ನು ಹಾದು ಆಸನಾರೂಢರಾದರು. ತಕ್ಷಣವೆ, "ನ್ಯಾಯ ಚಿರಾಯುವಾಗಲಿ, ನ್ಯಾಯ ಚಿರಾಯುವಾಗಲಿ" ಎಂಬ ಘೋಷಣೆ ಮೂಲೆ ಮೂಲೆಗಳಿಂದಲೂ ಕೇಳಿ ಬಂತು. ನ್ಯಾಯಾಧೀಶರು ಕೂಗು ಗಂಟೆಯನ್ನು ತಟ್ಟಿ, ಒಂದು ಕಡೆಯಿಂದ ಮತ್ತೊಂದು ಕಡೆಯವರೆ ವಿಗೂ ನ್ಯಾಯಾಸ್ಥಾನವನ್ನು ನೋಡಿ, ತೀರ್ಪನ್ನು ಕೇಳುವ ಸಲುವಾಗಿ ಜನರಲ್ಲಿದ್ದ ತುಂಬು ಉತ್ಸುಕತೆಯಿಂದ ಪ್ರಸನ್ನರಾಗಿ, ನಿಶ್ಚಿತ ದನಿಯಲ್ಲಿ ಇಂತೆಂದರು :

" ಸಾಕಷ್ಟು ರುಜುವಾತುಗಳಿಂದ ಸಿದ್ಧಾಂತ ಮಾಡಿರುವ ಪಬ್ಲಿಕ್ ಪ್ರಾಸಿಕ್ಯೂಟರರ ಅಭಿಪ್ರಾಯದಲ್ಲಿ ನಮ್ಮ **ಪೂರ್ಣ ವಿಶ್ವಾಸವಿದೆ. ಅಪರಾಧಿಗೆ ಮರಣ ದಂಡನೆ**

ಯನ್ನು ವಿಧಿಸಿದ್ದೇವೆ. ನಾಳೆ ಬೆಳಗಿನ ಜಾವ ಐದು ಘಂಟೆಗೆ ಸರಿಯಾಗಿ ವಿಶೇಷ ಪೋಲೀಸು ಅಧಿಕಾರಿ, ಬಲವಂತರಾಯರ ನೇತೃತ್ವದಲ್ಲಿ ಅಪರಾಧಿಯನ್ನು ಶೂಲಕ್ಕೇರಿಸತಕ್ಕದ್ದು........ನ್ಯಾಯ ಚಿರಾಯುವಾಗಲಿ.''

ತೀರ್ಪನ್ನು ಕೇಳುತ್ತಿರುವಂತೆಯೆ ಅಪರಾಧಿಯ ಮುಖದಲ್ಲಿ ನಿಸ್ಸಹಾಯತೆ ಹಾಗೂ ದುಃಖ ಒಡೆದು ಕಂಡಿತು. ಬಾಯಲ್ಲಿ ಕಚ್ಚಿದ್ದ ಪುಟ್ಟ ಅಂಗಿಯನ್ನು ಒಮ್ಮೆ ಎದೆಗಪ್ಪಿಕೊಳ್ಳೋಣವೆಂದು ಅವನು ಪ್ರಯತ್ನಿಸಿದ. ಆದರೆ ಅವನ ಕೈಗಳನ್ನು ಬಂಧಿಸಿದ್ದುದರಿಂದ ಅದು ಸಾಧ್ಯವಾಗಲಿಲ್ಲ. ಕಡೆಗೆ, ಒಮ್ಮೆ ಅದನ್ನು ಮುತ್ತಿಡುವ ಸಲುವಾಗಿ ಬಾಯ್ತೆರೆದ. ಕೂಡಲೆ ಆ ಪುಟ್ಟ ಅಂಗಿ ಅವನ ಬಾಯಿಂದ ಕಳಚಿ ಕೆಳಗೆ ಬಿದ್ದುಹೋಯಿತು. ತಕ್ಷಣವೆ, ಅವನು ತನ್ನ ಸರ್ವಸ್ವವನ್ನೂ ಕಳೆದುಕೊಂಡವನಂತೆ ಬಿಕ್ಕಿ ಬಿಕ್ಕಿ ಅಳಲು ಮೊದಲು ಮಾಡಿದ. ಅವನ ಕಣ್ಣಿನಿಂದ ಪಟ ಪಟ ಉರುಳಿದ ದೊಡ್ಡ ಹನಿಗಳಿಂದ ಆ ಪುಟ್ಟ ಅಂಗಿ ತೇವವಾಯ್ತು.

* * * * *

ನ್ಯಾಯಾಧೀಶರು ಎದ್ದು ನಿಂತರು. ರೂಢಿಯಂತೆ ಗುಮಾಸ್ತ ಎದುರು ಬಂದು ನಿಂತ. ನ್ಯಾಯಾಧೀಶರು ಒಂದು 'ಪತ್ರ'ವನ್ನು ಗುಮಾಸ್ತನ ಕೈಲಿಟ್ಟು, "ಬಲವಂತರಾಯರಿಗೆ ಇದು ಸೇರತಕ್ಕದ್ದು." ಎಂದವರೆ ಅಲ್ಲಿಂದ ಹೊರಟರು.

ನ್ಯಾಯಾಧೀಶರು ಅಲ್ಲಿಂದ ಹೊರಟಿದ್ದೆ ತಡ ವಿಪರೀತ ಗಲಾಟೆಗೆ ಷುರು ಆಯಿತು. ಒಟ್ಟಿನಲ್ಲಿ, ನ್ಯಾಯಾಧೀಶರು ಇತ್ತ ತೀರ್ಪನ್ನು ಜನರು ನಾನಾರೀತಿಯಿಂದ ಅನುಮೋದಿಸಿದರು. "ಆಹಾ ಬಲವಂತರಾಯರಿಗೆ ಎಂತಹ ಸನ್ಮಾನ" ಎಂದು ಕೆಲವು ಪೋಲೀಸು ಅಧಿಕಾರಿಗಳು ರಾಗ ಎಳೆದರು. ಮರಣ ದಂಡನೆಯ ವಿಧಿಯನ್ನು ಕಾರ್ಯರೂಪಕ್ಕೆ ತರುವ ಗೌರವಕ್ಕೆ—ನ್ಯಾಯಾಧೀಶರ ಪ್ರಸಾದಕ್ಕೆ—ಪಾತ್ರನಾದ ಅಧಿಕಾರಿಗೆ,

ಅದು ಅಧಿಕಾರ ಕ್ಷೇತ್ರದಲ್ಲಿ ಒಂದು ಆಶಾಮುದ್ರೆ ಎಂದು ನಂಬುವುದಕ್ಕೆ ಸಾಕಷ್ಟು ಸಂಪ್ರದಾಯದ ಬಲವಿತ್ತು.

ರೂಢಿಯಂತೆ ಒಬ್ಬ ಪೋಲೀಸಿನವನು ಅಪರಾಧಿಯ ಹತ್ತಿರ ಹೋಗಿ ತನ್ನೊಡನೆ ಬರುವಂತೆ ಸಂಜ್ಞೆ ಮಾಡಿದ. ಪುಟ್ಟ ಅಂಗಿಯನ್ನು ತನಗೆ ಕೊಡೆಂದು ಅಪರಾಧಿ ಅವನನ್ನು ಬೇಡಿಕೊಂಡ. ಆದರೆ ಪೋಲೀಸಿನವನು ತನ್ನ ಹಿಂದಿದ್ದ ಕೆಳದರ್ಜೆಯ ಪೋಲೀಸಿನವನನ್ನು ಕುರಿತು ಆ ಅಂಗಿಯನ್ನು ಠಾಣೆಗೆ ತೆಗೆದುಕೊಂಡುಹೋಗಿ ಇರಿಸುವಂತೆ ಅಪ್ಪಣೆ ಇತ್ತು, ಅಪರಾಧಿಯನ್ನು ದಬಾಯಿಸಿಕೊಂಡು ಹೊರಟುಹೋದ.

ಗುಮಾಸ್ತೆ ವೇದಿಕೆಯ ಮೇಲೆ ಬಂದು "ನ್ಯಾಯ ಚಿರಾಯುವಾಗಲಿ, ನ್ಯಾಯ ಚಿರಾಯುವಾಗಲಿ, ನ್ಯಾಯ ಚಿರಾಯುವಾಗಲಿ", ಎಂದು ಮೂರು ಬಾರಿ ಕೂಗಿದ. ಅಲ್ಲಿಗೆ ಅಂದಿನ ನ್ಯಾಯಾಸ್ಥಾನದ ಕಾರ್ಯಕಲಾಪಗಳು ಮುಗಿದುವು.

* * * *

ಜನರೆಲ್ಲ ಹೊರಡುವ ಪ್ರಯತ್ನದಲ್ಲಿ ತೊಡಗಿದ್ದರೂ ಒಬ್ಬರಿಗೊಬ್ಬರು ಮಾತನಾಡುವುದನ್ನು ಮಾತ್ರ ಬಿಟ್ಟಿರಲಿಲ್ಲ. ವಿಪರೀತ ಗದ್ದಲವಾಗುತ್ತಿತ್ತು. ಬಾಗಿಲ ಹತ್ತಿರ ಬರೇ ತಲೆಗಳೇ ಕಾಣುತ್ತಿದ್ದವು. ಒಳಗೇ ಅಷ್ಟು ಜನ ಬಂದಿದ್ದುಂಟಂತೆ, ಇನ್ನು ಹೊರಗೆ ಹೋಗಲಾರರೆ! ಹಾಗೂ ಹೀಗೂ, 'ಗಂಡಸರ ರಸ್ತೇ'ಲಿ ಗಂಡಸರೂ, 'ಹೆಂಗಸರ ರಸ್ತೇ'ಲಿ ಹೆಂಗಸರೂ ಗಿಜಿ ಗಿಜಿ ಹೊರಬಿದ್ದರು.

ಗಂಡಸರ ಗ್ಯಾಲರಿಯಲ್ಲಿ ಮುಂದುಗಡೆ ಕುಳಿತಿದ್ದ ಗಂಡಸು ಮಹಾಶಯ, ನ್ಯಾಯಾಧೀಶರು ಎದ್ದುಹೋದಮೇಲೆ, ತನಗೇನೂ ಭಯವಿಲ್ಲವೆಂದು ಸಮಾಧಾನ ತಂದುಕೊಂಡಿದ್ದ. ತನ್ನ ಅಮ್ಮಾವರಿಗಿಂತ ಮುಂಚೆ ಅವನು ಮನೆಯನ್ನು ಸೇರಿಕೊಳ್ಳಬೇಕಾಗಿದ್ದದ್ದರಿಂದ, ಅನೇಕ ಜನಗಳ ಕಾಲು ಸಂದಿಯಲ್ಲಿ ತೂರಿಕೊಂಡು, ಎಷ್ಟೋ ಜನರ ಪಾದಗಳಿಗೆ ತನ್ನ ತಲೆಯನ್ನು ತಾಕಿಸಿಕೊಂಡು, ಅಂತೂ ಇಂತೂ ಬೇಗಲೆ ಗಂಡಸರ ರಸ್ತೆಯಲ್ಲಿ ಅವನು ಹೊರಬಿದ್ದ.

ನ್ಯಾಯಸ್ಥಾನದಲ್ಲಿ ನಡೆದುದೊಂದೂ ಅವನ ಗಮನಕ್ಕೆ ಬಂದಿರ ಲಿಲ್ಲವಾಗಿ ಅವನು ನೆರೆಯವನನ್ನು "ಏನು ತೀರ್ಪು ಕೊಟ್ಟರು ?" ಎಂದು ಕೇಳಬೇಕೆಂದು ಮಾಡಿದ್ದ. ಆದರೆ ಅದರಿಂದ ತಾನು ಮನೆ ಸೇರುವುದಕ್ಕೆ ಹೊತ್ತಾಗಿ ಬಿಡುವುದೊ ಏನೊ ಎಂದು ಅಂಜಿ, "ಸಾಯಂ ಕಾಲ ಅವ್ರು ಜೊತೆಯವರೊಂದಿಗೆ ಇದ್ರ ವಿಷ್ಯಾನ ಮಾತ್ನಾಡ್ತಿರ್ತಾ ಳಲ್ಲಾ....ಆಗ ಅಡಿಗೆ ಮನೆ ಬಾಗ್ಲ್ನಲ್ಲಿ ನಿಂತ್ಕೊಂಡು ಕೇಳ್ಕೊಳ್ತೀನಿ" ಎಂದು ಸಮಾಧಾನ ತಂದುಕೊಂಡು ಬೇಗ ಬೇಗ ಮುಂದೆ ನಡೆದ.

ಕೇವಲ ಒಂದೇ ಘಂಟೆಯಲ್ಲಿ ಜನರೆಲ್ಲಾ ದೊಡ್ಡ ಚೌಕವನ್ನು ದಾಟಬಿಟ್ಟಿದ್ದರು. ನೋಡಬೇಕೆಂದರೂ ದೊಡ್ಡ ಚೌಕದಲ್ಲಿ ಒಂದು ವಾಹನ ಕೂಡ ಇರಲಿಲ್ಲ.

೧೧

ಊಟದ ಶಾಸ್ತ್ರವನ್ನೂ ಮಾಡದೆ, ತಲೆಯಮೇಲೆ ಕೈ ಇಟ್ಟು ಕೊಂಡು ವಿಶೇಷ ಪೋಲೀಸು ಅಧಿಕಾರಿ ಬಲವಂತರಾಯರು ತಮ್ಮ ಕೋಣೆಯ ಕುರ್ಚಿಯಲ್ಲಿ ಕುಳಿತಿದ್ದರು. ನೂರಾರು ಯೋಚನೆಗಳು. ಪ್ರಶ್ನೆಗಳು ಅವರ ಮುಂದೆ ನಿಂತು ಹಲ್ಲುಕಿರಿಯುತ್ತಾ ಅವರ ಹೃದಯ ವನ್ನು ಸೂಜಿಗಳಂತೆ ಚುಚ್ಚುತ್ತಿದ್ದುವು. ಅರ್ಧ ಘಂಟೆಯ ಹಿಂದೆ ತಾನೆ ನ್ಯಾಯಸ್ಥಾನದ ಗುಮಾಸ್ತ ಪರಿವಾರ ಸಮೇತನಾಗಿ ಬಂದು ಬಲವಂತರಾಯರಿಗೆ ಅವರ ಪಾಲಿಗೆ ಬಂದಿದ್ದ ಗೌರವದ "ಪತ್ರ"ವನ್ನು ಮುಟ್ಟಿಸಿ ಹೋಗಿದ್ದ.

ಅಂದು ಬಲವಂತರಾಯರ ಮನಸ್ಸು ಅಷ್ಟು ತೀರ ರೋಸಿಹೋಗ ದಿದ್ದಿದ್ದರೆ, ಆಗ ಅವರು ಗುಮಾಸ್ತ ತಮಗೆ ತಂದ ಶುಭ ವಾರ್ತೆಯನ್ನು ಕುರಿತು ಎಷ್ಟು ಹಿಗ್ಗುತ್ತಿದ್ದರೊ ಏನೊ! ಗುಮಾಸ್ತ ಯೋಚಿಸಿದ್ದಂತೆ ಅವನ "ವಾಕಿಂಗ್ ಸ್ಟಿಕ್ ಬಾರ್ಡರ್" ಸೀರೆಯ ಸಮಸ್ಯೆ ಕೂಡ ಬಗೆ ಹರಿದುಬಿಡುತ್ತಿತ್ತೊ ಏನೊ! ಆದರೇನು .... .... ಬಲವಂತರಾಯರ ಮನಸ್ಸು ಅಷ್ಟು ರೋಸಿಹೋಗಿತ್ತು .......ತೀರ ರೋಸಿಹೋಗಿತ್ತು.... ...

ಸದಾ ಹರ್ಷಚಿತ್ತರಾಗಿರುತ್ತಿದ್ದ ಬಲವಂತರಾಯರ ಮನಸ್ಸು ಅಷ್ಟ ನ್ನೊಂದು, ಬೆಂದು, ಬೇಸತ್ತು ಬೆಂಡಾಗಿ ಹೋಗಿತ್ತು! ಗುಮಾಸ್ತನಿಗೆ ಹಲ್ಲು ಕಿರಿದಿದ್ದೇ ಬಂತು, ಬಾಯಿ ಬಿಟ್ಟಿದ್ದೇ ಬಂತು. ಅವನ "ವಾಕಿಂಗ್ ಸ್ಟಿಕ್ ಬಾರ್ಡರ್" ಸೀರೆಯ ಸಮಸ್ಯೆ ಬಗೆಹರಿಯುವುದಂತಿರಲಿ, ಬಲವಂತರಾಯರು—ಅವನಿಗೆ ಚಿರಪರಿಚಿತರಾಗಿದ್ದ ಗೌರವಸ್ಥರಾದ ಬಲವಂತರಾಯರು—ಅವನನ್ನು ಹೆಸರು ಹಿಡಿದು ಕೂಗಿ ನಾಲ್ಕು ಉಪಚಾರದ ಮಾತುಗಳನ್ನು ಕೂಡ ಆಡಿಸದೆ ಕಳುಹಿಸಿಬಿಟ್ಟಿದ್ದರು. "ಹು, ದೊಡ್ಡೋರಾಗ್ತಾ ಆಗ್ತಾ ಹಿಂದಿನ ಸ್ಮರಣೆ ಎಲ್ಲಿರುತ್ತೆ" ಎಂದುಕೊಳ್ಳುತ್ತಾ ಗುಮಾಸ್ತ ಜೋಲು ಮುಖ ಹಾಕಿಕೊಂಡು ಹಿಂತಿರುಗಿದ್ದೇ ಅವನ ಪಾಲಿಗೆ ಬಂದದ್ದು.

"ತನಗೆ ನಿಲುಕದಿದ್ದ ಮಾತ್ರಕ್ಕೆ ಅದು ಹುಳಿ" ಎಂಬ ಸಣ್ಣತನದಿಂದ, ಸ್ವಾರ್ಥದ ದೃಷ್ಟಿಯಿಂದ ಆ ಗುಮಾಸ್ತ ಬಲವಂತರಾಯರನ್ನು ಬೈಯುತ್ತಾ ಹೊರಟನೆ ಹೊರತು ನಿಜಕ್ಕೂ ಬಲವಂತರಾಯರೇನು ಒಂದು ದಿವಸವಲ್ಲೇ ತಮ್ಮ ಸೌಜನ್ಯವನ್ನು ಕಳೆದುಕೊಂಡು ದುರಹಂಕಾರಿಗಳಾಗಿರಲಿಲ್ಲ. ದುರಹಂಕಾರದ ಮಾತೇಕೆ! ಬಲವಂತರಾಯರು ಸಿಕ್ಕಿಬಿದ್ದಿದ್ದ ಸಂಕಟದ ಅಂತರಾಳವನ್ನು ನೋಡಿದ್ದೆ ಆಗಿದ್ದಿದ್ದರೆ ಅವನನ್ನು ಅಳೆಯುವುದಂತಿರಲಿ—ಎಂತಹ ಕಠಿಣ ಹೃದಯದವನಾಗಲಿ ಅವರ ಜೊತೆಯೆ ಬೆರೆತು, ಪಕ್ಕದಲ್ಲಿ ಕೂತು, ಅವರ ಕಣ್ಣೀರನ್ನು ಒರಸುತ್ತಾ, ತಾನೂ ಕಣ್ಣೀರು ಹಾಕುತ್ತಾ ಅವರ ನೆರಳಿನ ಜೊತೆ ಕುಕ್ಕರಿಸಿಬಿಡುತ್ತಿದ್ದ. ಅಂತಹ ದುಃಖದ ಪ್ರಸಂಗಕ್ಕೆ ಒಳಗಾಗಿದ್ದರು ಬಲವಂತರಾಯರು! ಆಗ ಎಲ್ಲಿ ಬಂದೀತು ಸೌಜನ್ಯ?

* * * *

ಬಲವಂತರಾಯರು ಹುಟ್ಟಿದ್ದು ದೊಡ್ಡ ವಂಶದಲ್ಲಿ. ಹೆಸರಿನಿಂದಲೂ ದೊಡ್ಡ ವಂಶ, ಹಣದ ದೃಷ್ಟಿಯಿಂದಲೂ ದೊಡ್ಡ ವಂಶ. ಇನ್ನು ಕೇಳಬೇಕೆ, ಬಲವಂತರಾಯರು ಬೆಳೆದದ್ದೂ ದೊಡ್ಡ ತರಹದಲ್ಲಿ.

ಕೇವಲ ಇಪ್ಪತ್ತನೆ ವಯಸ್ಸಿನಲ್ಲೆ ಬಲವಂತರಾಯರು ತಂದೆ

ತಾಯಿಯನ್ನು ಕಳೆದುಕೊಂಡರು. ಆ ಸಣ್ಣ ವಯಸ್ಸಿನಲ್ಲೇ ಆಸ್ತಿ ಪಾಸ್ತಿಯ ಜವಾಬ್ದಾರಿಯನ್ನೆಲ್ಲಾ ಹೊತ್ತು, ತಾವೇ ತಾವಾಗಿ ಪ್ರಪಂಚ ದಲ್ಲಿ ತಾವೂ ಒಂದು ಸ್ಥಾನವನ್ನು ಕಲ್ಪಿಸಿಕೊಂಡು, ತಮ್ಮ ವಂಶದ ಕೀರ್ತಿಯನ್ನು ಬೆಳಗಬೇಕಾಗಿ ಬಂತು. ಆದರೇನು! ಅವರದು ಒಳ್ಳೆಯ ಸಂಸ್ಕಾರ. ಆಗಲೆ ನಾಲ್ಕಾರು ದೊಡ್ಡ ದೊಡ್ಡ ಪರೀಕ್ಷೆಗಳನ್ನು ಪಾಸುಮಾಡಿ ಸಮಾಜದಲ್ಲಿ "ಭಲೆ" ಎನ್ನಿಸಿಕೊಂಡಿದ್ದರು. ಇವರ ಇಂಥಾ ಪ್ರತಿಭೆಗೆ ಸಲ್ಲುವ—ಸಾಮಾನ್ಯವಾಗಿ ನಿವೃತ್ತರಾಗುವ ಹೊತ್ತಿಗೆ ಸಿಲು ಕುವ—ದೊಡ್ಡ ಹುದ್ದೆ ಇವರಿಗೆ ಪೋಲೀಸು ಶಾಖೆಯಲ್ಲಿ ದೊರಕಿತು.

ಬಲವಂತರಾಯರು ಹಾಯಾಗಿದ್ದರು. ಅವರಿಗೆ ಮುಖ್ಯವಾಗಿ ಬೇಕಾಗಿದ್ದದ್ದು ಆತ್ಮಗೌರವ. ಅವರನ್ನು ನೋಡಿದ ಜನರೆಲ್ಲಾ "ಯಾರು ಬಲವಂತರಾಯರೇ, ದೇವ್ರಂಥಾ ಮನುಷ್ಯರು, ಅವ್ರನ್ನ ನೋಡಿ ಕಲೀಬೇಕು" ಅಂತಾ ಇರಬೇಕು. ರಾಯರ ಕನಸು ಕೇವಲ ಇಪ್ಪತ್ತೆರಡನೆ ವರುಷದಲ್ಲೆ ನೆನಸಾಗಿತ್ತು. ತಮ್ಮ ಹತ್ತಿರ ನಾನಾ ಕಾರಣ ಗಳಿಂದ ಬರುತ್ತಿದ್ದ ಜನರೊಂದಿಗೆ ಅವರು ಸಕ್ಕರೆಯಂತೆ ಬೆರೆಯುತ್ತಿ ದ್ದರು.. ಒಟ್ಟಿನಲ್ಲಿ ಸದಾ ಹರ್ಷಚಿತ್ತರಾಗಿರುತ್ತಿದ್ದರು. "ನಾನೂ ಸಂತೋಷ್ವಾಗಿರ್ಬೇಕು ... ...ಹತ್ತು ಜನಾನೂ ನಕ್ಕು ನಲೀತಾ ಇರ್ಬೇಕು ........ಪ್ರಪಂಚಾನೇ ಕುಣೀತಾ ಇರ್ಬೇಕು" ಎನ್ನುವ ವಿಶಾಲ ಮನೋ ಭಾವ ರಾಯರದು.

ರಾಯರ ವಿವಾಹಕ್ಕೆ ಪೀಠಿಕೆಯಾದದ್ದು "ಪಾರ್ಕ್ ಡಿ ಆರಾಮ್" ನಲ್ಲಿ. ಒಂದು ದಿನ ಸಂಜೆ ರಾಯರು "ಪಾರ್ಕ್ ಡಿ ಆರಾಮ್" ಬಿಟ್ಟು ಇನ್ನೇನು ಹೊರಡುವುದರಲ್ಲಿದ್ದರು. ಅಷ್ಟರಲ್ಲೆ, ರಾಜಧಾನಿಯಲ್ಲೆಲ್ಲ ಹೆಸರಾಗಿದ್ದ ದೊಡ್ಡ ಕಾರು ಅವರ ಮುಂದೆ ಸರಿಯಾಗಿ ಬಂದು ನಿಂತಿತು. ರಾಯರು ಆಶ್ಚರ್ಯದಿಂದ ನೋಡುತ್ತಿರುವಂತೆಯೆ, ಕಾರನ್ನು 'ಡ್ರೈವ್' ಮಾಡಿಕೊಂಡು ಬಂದಿದ್ದ ಹೆಂಗಸು ಹಠಾತ್ತಾಗಿ ಕಾರಿನಿಂದ ಇಳಿದು, ತನ್ನ ಎರಡೂ ಕೈಗಳಿಂದಲೂ ರಾಯರ ಭುಜವನ್ನು ಹಿಡಿದು, "ನಿಮ ಗಾಗಿ ನಾನು ಅವ್ರನ್ನ ನಿನ್ನೆ ತಾನೆ ವಿಚ್ಛೇದನಮಾಡ್ಬಿಟ್ಟೆ. ನನಗೆ

ಪ್ರೇಮ ಭಿಕ್ಷೆಯನ್ನು ಕೊಟ್ಟು ನೀವೇ ಉದ್ಧಾರ ಮಾಡಬೇಕು" ಎಂದು ಅವರ ಮುಖವನ್ನೆ ನೋಡ ಹತ್ತಿದಳು. ರಾಯರಿಗೆ ಒಮ್ಮೆಲೇ ಆಶ್ಚರ್ಯ ಮತ್ತು ಸಂತೋಷಗಳಾಗತೊಡಗಿದುವು. "ಎಲಾ, ಈ ರೂಪಸಿ, ಈ ನಾರೀಮಣಿ, ಈಕೆ, ಮೊದ್ಲೂಲು, ರಾಷ್ಟ್ರದಲ್ಲೇ ಎಲ್ಲರಿಗಿಂತಲೂ ಹೆಸರಾಗಿದ್ದ ಆ ಪ್ರತಿಭಾಶಾಲಿಗಳ ಮನೆಯನ್ನು ತುಂಬಿಸಿ ಅವರನ್ನು ಮತ್ತೂ ದೊಡ್ಡವರ್ನಾಗಿ ಮಾಡಿದ್ಳು. ಆಮೇಲೆ, ವಿಚ್ಛೇದನಮಾಡಿ ಅಷ್ಟೇ ದೊಡ್ಡಮನುಷ್ಯರಾದ ಮಂತ್ರಿಗಳ ಮನೆ ತುಂಬ್ಸಿದ್ಳು ಇಂಥಾ ಇವ್ಳು.... ನಮ್ಮ ರಾಷ್ಟ್ರದಲ್ಲೇ, ಎಲ್ಲರ ಬಾಯ್ಲೂ ಆದರ್ಶಕ್ಕೇ ಉದಾಹರಣೆಯಾಗಿರೋ ಇವ್ಳು, ಈ ದೊಡ್ಡಮನೆತನದವ್ಳು, ನನ್ಪಾಲಿಗೆ ಬಂದಿರೋದು, ಆಹಾ!, ನನ್ನ ಭಾಗ್ಯವಲ್ಲದೆ ಮತ್ತೇನು!" ಇವೇ ಮುಂತಾದ ಹಲವಾರು ಹಿಗ್ಗಿನ ಯೋಚನೆಗಳು ಒಂದೇ ನಿಮಿಷದಲ್ಲಿ ರಾಯರ ತಲೆಯಲ್ಲಿ, ನುರಿತ ಕೈಯಿಂದ ನೆಲಕ್ಕೆ ಬಿದ್ದ ಬುಗುರಿಯಂತೆ ಗಿರ್ರೆಂದು, ಸುತ್ತಿದುವು. ರಾಯರು ಕ್ಷಣಮಾತ್ರ ಬುದ್ಧಿಶೂನ್ಯರಾದರು; ಅನಂತರ ಚೇತರಿಸಿಕೊಂಡು, "ನೀವು ...ನನ್ನನ್ನು....ನಿಜವಾಗ್ಲೂ" ಎಂದು ಅರೆನುಡಿದು ತಲೆ ತಗ್ಗಿಸಿದರು. ತಕ್ಷಣವೆ ಆ ನಾರೀರತ್ನ "ನನ್ನನ್ನು 'ನೀನು' ಎಂದು ಸಂಬೋಧಿಸಿ ಅಂದ್ರೆ....ಇಲ್ದಿದ್ರೆ ನನ್ಗೆ ದುಃಖವಾಗುತ್ತೆ" ಎಂದು ಅಸಾಧ್ಯವಾದ ಸಲಿಗೆಯಿಂದ ರಾಯರ ಗಡ್ಡದಮೇಲೆ ಕೈ ಇಟ್ಟು ಮುಖವನ್ನು ಹಿಡಿದು ಎತ್ತಿದಳು. ಹಿಗ್ಗಿನ ಆವೇಶದಿಂದ ರಾಯರು ತಮ್ಮ ಎರಡೂ ಕೈಗಳನ್ನೇ ಮಾಲೆಯಂತೆ ಹಿಡಿದು ಆ ನಾರೀಮಣಿಯ ಕುತ್ತಿಗೆಯಮೇಲೆ ಹಾಕಿ, ಉಕ್ಕಿಬರುತ್ತಿದ್ದ ತಮ್ಮ ಸಮ್ಮತಿಯ ಮುದ್ರೆಯನ್ನು ಅವಳ ತುಟಿಗಳ ಮೇಲೆ ಒತ್ತಿದರು.

ವಿವಾಹವಾದ ಹೊಸತರಲ್ಲಂತೂ ರಾಯರ ಹಿಗ್ಗಿಗೆ ಮಿತಿಯೇ ಇಲ್ಲ. "ರೋಡ್ಸ್ ಡಿ ಆರಾಮ್"ನಲ್ಲಿ ರಾಯರು ಪತ್ನೀಸಮೇತರಾಗಿ ಆನಂದದಿಂದ ನಡೆದುಹೋಗುವರು; ನಾಟಕಗಳಿಗೆ ಹೋಗುವರು. ತಮ್ಮ ಪಾಲಿಗೆ ಬಂದಿದ್ದ ರೂಪಸಿಯನ್ನು ನಗಿಸುತ್ತಾ ತಾವೂ ನಗುವರು. ನಕ್ಕು ನಕ್ಕು ನಲಿಯುವರು. ಬೀದಿಹಾದಿಗಳಲ್ಲಿ ಇವರನ್ನೆ ನೋಡುತ್ತೆ

ಜನ, "ಆಹಾ! ಬಲವಂತರಾಯರು ಎಂತಹ ಭಾಗ್ಯಶಾಲಿಗಳು, ಅಂತಹ ಅಮೂಲ್ಯ ರತ್ನವನ್ನು ತಮ್ಮದಾಗಿ ಮಾಡಿಕೊಂಡಿದ್ದಾರೆ" ಎಂದು ನಾನಾರೀತಿಯಲ್ಲಿ ರಾಯರ ನಸೀಬನ್ನು ಪಿಸುಮಾತಿನಲ್ಲಿ ಹೊಗಳುತ್ತಿದ್ದುದು ರಾಯರ ಕಿವಿಗೆ ಬೀಳುತ್ತಿದ್ದಾಗಲಂತೂ, ಅವರು ಅಲ್ಲೇ ನಿಂತು, ತಮ್ಮ ಪಾಲಿಗೆ ಬಂದಿದ್ದ ಭಾಗ್ಯಲಕ್ಷ್ಮಿಯ ಕೈಯನ್ನು ತಮ್ಮ ಕೈಗಳ ಜೊತೆ ಹೊಸೆಯುತ್ತಾ ನಡೆಯುವರು. ಮನಸ್ಸಿನಲ್ಲೇ, "ನಾನೆಂತಹ ಭಾಗ್ಯಶಾಲಿ" ಎಂದುಕೊಳ್ಳುತ್ತಾ ಹಿಗ್ಗುವರು. ಕೃತಜ್ಞತೆಯಿಂದ ತಮ್ಮ ಆ ನಾರೀಮಣಿಯನ್ನು ನೋಡುತ್ತಾ, "ನೀನು ನನ್ನ ಮೇಲೆ ಹೊರಿಸಿರುವ ಈ ಉಪಕಾರದ ದೊಡ್ಡ ಹೊರೆಯನ್ನು ಕೆಳಗಿರಿಸಲು ನಾನು ಏನು ಬೇಕಾದರೂ ಮಾಡಲು ಸಿದ್ಧ" ಎನ್ನುವ ಮನೋಭಾವವನ್ನು ಎಲ್ಲ ಸನ್ನಿವೇಶಗಳಿಗೂ ಸಮನ್ವಯ ಮಾಡಿಕೊಂಡು ಕಾರ್ಯರೂಪಕ್ಕೆ ತರುವರು. "ಭಲೆ ಧನ್ಯ ಬಲವಂತರಾಯ!" ಎನ್ನುತ್ತಿತ್ತು ಸಮಾಜ.

ತಮ್ಮ ಭಾಗ್ಯರತ್ನ ಮೊದಲು ವಿವಾಹವಾಗಿ ವಿಚ್ಛೇದನ ಮಾಡಿದ್ದ ಇಬ್ಬರು ರಾಷ್ಟ್ರದ ಬೃಹದ್ವ್ಯಕ್ತಿಗಳು ಸಂಜೆಹೊತ್ತು ಸಂಚಾರ ಮಾಡುವ "ಪಾರ್ಕ್ ಡಿ ಲಕ್ಸ್", "ರೋಡ್ಸ್ ಡಿ ಆರಾಮ್" ಇತ್ಯಾದಿ ಜಾಗಗಳಿಗೆ ಬೇಕೆಂತಲೆ ರಾಯರು ಪತ್ನೀಸಮೇತರಾಗಿ ಹೋಗುವರು. ಉದ್ದೇಶಪೂರ್ವಕವಾಗಿಯೇ ತಮ್ಮ ಪತ್ನಿ ಜೀವನಾಂಶದ ಭಾಗವಾಗಿ ತಂದಿದ್ದ ಮಂತ್ರಿಗಳ ಕಾರಿನಲ್ಲೇ ಹೋಗುವರು ಪ್ರಥಮತಃ ವಿವಾಹವಾಗಿದ್ದ ಪ್ರತಿಭಾಶಾಲಿಗಳು ಈಕೆಗೆ 'ಖಾಯಿಷ್' ಮಾಡಿ ಕೊಡಿಸಿದ್ದ ಸೀರೆಯನ್ನೇ ಉಡಿಸುವರು. ಹಾದಿಯಲ್ಲಿ, ಪ್ರತಿಭಾಶಾಲಿಗಳೇ ಆಗಲಿ, ಮಂತ್ರಿಗಳೇ ಆಗಲಿ ಸಿಕ್ಕಿದರೇದರೆ ಸಾಕು, ರಾಯರು ಮುಖ ಚಾಚಿ "ಓಹೊ, ಗಾಳಿ ಸಂಚಾರ ಹೊರಟಿರೇನು ?....ಒಬ್ಬರೇ ಹೊರಟಂತಿದೆ" ಎನ್ನುತ್ತಾ ತಮ್ಮ ಕೈಯನ್ನು ತಮ್ಮಾಕೆಯ ಭುಜದ ಮೇಲಿರಿಸುವರು. "ನನ್ನ ಆತ್ಮಗೌರವ ಎಂತಹ ಮೇಲ್ಮಟ್ಟವನ್ನು ಮುಟ್ಟಿದೆ" ಎಂದು ಹಿಗ್ಗುತ್ತಾ ಆನಂದದಿಂದ ಉನ್ಮತ್ತರಾಗುವರು.

ಒಮ್ಮೆ ರಾಯರು ಆನಂದದ ಆವೇಶದಲ್ಲಿದ್ದಾಗ ನ್ಯಾಯಾಸ್ಥಾನದ ಗುಮಾಸ್ತ—ಅಪರಾಧಿಯ ಹೇಳಿಕೆ "ಬರೆಯುತ್ತಿದ್ದ ಗುಮಾಸ್ತ—"ರಾಯರೆ, ವರಸಾಮ್ಯ ಲಕ್ಷ್ಮೀನಾರಾಯಣನಂತೆ ಕೂಡಿದೆ....ಅಷ್ಟಲ್ಲದೆ ಸುಸಂಸ್ಕೃತರಾದ ಆ ನಾರೀಶಿರೋಮಣಿ ಅವರಿಬ್ಬರನ್ನು ವಿಚ್ಛೇದನ ಮಾಡಿದ್ರೇ ಮತ್ತೆ", ಎಂದು ರಾಯರ ಆವೇಶಕ್ಕೆ ತಂಬಾಕಿನ ಪ್ರಯೋಗ ಮಾಡಿದ್ದ. ಆಗ ರಾಯರು, "ಇದೊ, ಇದನ್ನು ತೆಗೆದು ಕೊಳ್ಳಿ" ಎಂದಿದ್ದರು. "ಇಂಥಾ ಫೈಲಿ ನನಗೇಕೆ ರಾಯರೆ" ಎನ್ನುತ್ತಲೇ ಗುಮಾಸ್ತ ಅದಕ್ಕೆ ಕೈ ನೀಡಿದ್ದ.

ಅಂತಹ ರಾಯರನ್ನು ಆ ಅಲ್ಪ ಗುಮಾಸ್ತ ಸಂತೋಷದ ಸಮಯ ದಲ್ಲಿ ಹೊಗಳಿ ಹೊಟ್ಟೆ ತುಂಬಿಕೊಂಡನೆ ಹೊರತು, ಇಂದು ಅವರು ದುಃಖಸಾಗರದಲ್ಲಿ ಮುಳುಗಿದ್ದಾಗ ಅವರ ಕಷ್ಟಸುಖವನ್ನೂ ವಿಚಾರಿ ಸದೆ, ಬೊಗಳುತ್ತಾ ಹೊರಟುಹೋಗಿದ್ದ. ಅಲ್ಪ, ಅವನಿಗೆಲ್ಲಿ ಬಂದೀತು ದೊಡ್ಡತನ!

* * * *

ರಾಯರ ವಿವಾಹವಾಗಿ ಇನ್ನೂ ನಾಲ್ಕು ತಿಂಗಳಿಲ್ಲ. ಅವರ ಪತ್ನಿ ಸ್ವಲ್ಪ ಮುಖ ಗಂಟಿಕ್ಕುವುದಕ್ಕೆ ಷುರು ಆಯಿತು. ಸಂಜೆ ಹೊತ್ತು "ಹವಾ ತಿನ್ನೋಣ ಬಾ" ಎಂದು ರಾಯರು ಕರೆದರೆ "ನೀವೊಬ್ರೇ ಹೋಗಿ, ನಂಗೆ ಸ್ವಲ್ಪ ಬೇರೆ ಕೆಲ್ಸ ಇದೆ....ಹೋಗ್ಬರ್ತೇನೆ" ಎನ್ನುತ್ತಲೆ ಆ ನಾರೀರತ್ನ ತನ್ನ ಕಾರನ್ನು ತೆಗೆದುಕೊಂಡು ಹೊರಟುಬಿಡುತ್ತಿದ್ದಳು. ರಾಯರು ಒಬ್ಬರೇ ಹೊರಗೆ ಹೋಗಬೇಕಾಗುತ್ತಿತ್ತು. "ಅವ್ಳಿಗೂ ಇಷ್ಟು ದಿನ 'ಹನಿ ಮೂನ್ ಸಮಾಧಿ'ಯಲ್ಲಿದ್ದು ಬೇಜಾರಾಗಿರ ಬಹುದು ...ಇನ್ನಾಲ್ಕುದಿನ ಆದ್ಮೇಲೆ ಸ್ವತೇವ ದಾರೀಗ್ಬರ್ತ್ತಾಳೆ" ಎಂದು ಕೊಳ್ಳುತ್ತಿದ್ದರು ರಾಯರು. "ಅವ್ಳಿಗೆ ಬರೋ ಜೀವನಾಂಶ ನನ್ನಂಬ್ಳ ಕ್ಕಿಂತ ಜಾಸ್ತಿ ...ತೂಕವಾದ ವ್ಯಕ್ತಿ ಅವ್ಳೂನೂ....ಅವ್ಳು ಸ್ವಾತಂತ್ರ್ಯ ಬಯಸೋದು ನನ್ಗೂ ಭೂಷಣವೇ ...ನನಗೆ ತಾನೆ ಏನು! ಅವ್ಳು ಪತ್ನಿ ಆಗಿರೋದೇ ಗೌರವ" ಎಂದು ಸಮಾಧಾನ ತಂದುಕೊಳ್ಳು

ತ್ತಿದ್ದರು. “ದಾಂಪತ್ಯ ಜೀವನ ಅನ್ನೋದೇನು ಹಾಲುಹೋವ ತಿನ್ನೋದ್ಕೆಟ್ಟ್ಬೋಯ್ತೇ.... ಕಷ್ಟ ಸುಖ ಎರಡೂ ನೋಡ್ಬೇಕು.... ಒಬ್ಬ ರ್ನೊಬ್ರು ಅನುಸರಿಸ್ಕೊಂಡ್ಹೋಗ್ಬೇಕು........ ಅವಳ ಸುಖಕ್ಕೂ ನಾನು ಗಮನ ಕೊಡ್ಬೇಕು” ಎಂದು ಶ್ರದ್ಧೆಯಿಂದ ಯೋಚಿಸುತ್ತಿದ್ದರು.

ತಮ್ಮ ಪತ್ನಿಯ ಚಿತ್ತವೃತ್ತಿಯನ್ನು ಅರ್ಥಮಾಡಿಕೊಳ್ಳುತ್ತಾ, ಅದಕ್ಕೆ ಸರಿಯಾಗಿ ರಾಯರು ಹೊಂದುಕೊಂಡು ಹೋಗುತ್ತಿದ್ದುದರಿಂದ ಅವರ ದಾಂಪತ್ಯ ಕೂಡಿಕೊಂಡಿತ್ತು. “ದಾಂಪತ್ಯ ಜೀವನ ಸುಗಮ ವಾಗಿ ಸಾಗಬೇಕಾದಲ್ಲಿ ಗಂಡಹೆಂಡಿರು ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕು; ಯಾವ ಕೊಂಕೂ, ಸಂಕೋಚವೂ ಇಲ್ಲದೆ ಒಬ್ಬರ ಮನಸ್ಸನ್ನು ಇನ್ನೊಬ್ಬರ ಮುಂದೆ ಬಿಚ್ಚಿಡಬೇಕು. ಪತಿ ತನ್ನ ಪತ್ನಿಯೇ ತನ್ನ ಕನ್ನಡಿ ಎಂಬ ಭಾವದಿಂದ ವರ್ತಿಸಬೇಕು. ಅಂತೆಯೇ ಪತ್ನಿಯೂ ತನ್ನ ಪತಿಯೇ ತನ್ನ ಕನ್ನಡಿ ಎಂಬ ಭಾವದಿಂದ ನಡೆದು ಕೊಳ್ಳಬೇಕು” ಹೀಗೆಂದು ರಾಯರು ಆಗತಾನೆ ಕೊಂಡು ತಂದಿದ್ದ, ರಾಷ್ಟ್ರ ದಲ್ಲೇ ಹೆಸರಾಗಿದ್ದ ಸುಪ್ರಸಿದ್ಧ ಮನಶ್ಶಾಸ್ತ್ರಜ್ಞರು ಬರೆದಿದ್ದ ಪುಸ್ತಕದಲ್ಲಿ ಅಪ್ಪಣೆ ಕೊಡಿಸಿತ್ತು. ಇದನ್ನು ಓದುತ್ತಲೆ ಬಹಳ ದಿವಸಗಳಿಂದ ಬಾಡಿದ್ದ ರಾಯರ ಮುಖ ಅರಳಿತು. ತಮ್ಮ ಸಮಸ್ಯೆಯ ಬೀಗಕ್ಕೆ ಅವರಿಗೆ ಬೀಗದ ಕೈ ದೊರಕಿದಂತಾಯಿತು. ಅಂದು ಮಧ್ಯಾಹ್ನ ಅವರು ತಮ್ಮ ಪತ್ನಿಯನ್ನು ಹುಡುಕಿಕೊಂಡು ಅವಳ ಕೋಣೆಗೆ ಹೋಗಿ, “ಚಿನ್ನಾ, ನಿನ್ನ ದುಃಖವೇ ನನ್ನ ದುಃಖ, ನಿನ್ನ ಸುಖವೇ ನನ್ನ ಸುಖ. ಹೀಗಿರು ವಲ್ಲಿ, ನೀನು ಈಚಿನ ಕೆಲವು ದಿವಸಗಳಿಂದ ಒಬ್ಬಳೇ ನುಂಗುತ್ತಿರುವ ದುಃಖದ ಪಾಲನ್ನು ನನಗೂ ಕೊಟ್ಟು ನನ್ನನ್ನು ತೃಪ್ತಿಪಡಿಸಲೊಲ್ಲೆಯಾ?” ಎಂದು ನಾಟಕದಲ್ಲಿ ಹೇಳುವಂತೆ ಹೇಳಿದರು. ಆ ನಾರೀರತ್ನ ಅವರ ಮಾತು ಕೇಳಿದ್ದೇ ತಡ, “ನೀನು ಇಲ್ಲಿಂದ ಸದ್ಯ ಹೊರಟ್ಹೋಗಪ್ಪಾ. ನಾನು ನೋಡ್ಲಾರೆ, ಆಷ್ಟು ಮಾಡ್ಬಿಡು ಸಾಕು.... ಬೇಕಾದ್ರೆ ನನ್ನ ಜೀವ ನಾಂಶದಲ್ಲಿ ಅರ್ಧ ನಿಂಗೇ ಬರ್ಕೊಟ್ಬಿಡ್ತೇನೆ” ಎಂದು ಸಿಡಸಿಡ ಹೇಳಿ ಬಿಟ್ಟು ಅಲ್ಲಿಂದ ಒಂದೇ ಹಾರಿಗೆ ಎದ್ದು ‘ಗ್ಯಾರೇಜ್’ ಕಡೆ ಹೊರಟಳು.

ತನ್ನ ಕಾರನ್ನು ಹಾಕಿಕೊಂಡು ಎಲ್ಲಿಗೋ ಹೊರಟುಬಿಟ್ಟಳು.

ರಾಯರಿಗೆ ತಮ್ಮ ಮನೆ ತಮ್ಮ ಮೇಲೇ ಕಳಚಿ ಬಿದ್ದಂತಾಯಿತು; ತಾವು ಬಿಟ್ಟ ಬಾಣ ತಮಗೇ ನೆಟ್ಟುಕೊಂಡಂತನಿಸಿತು. ಪ್ರಾಣವನ್ನೇ ಕಳೆದುಕೊಳ್ಳುತ್ತಿರುವಷ್ಟು ನೋವಾಯಿತು. ಹೋಮ ಮಾಡುವುದಕ್ಕೆ ಹೋಗಿ ಗಡ್ಡವನ್ನು ಸುಟ್ಟುಕೊಂಡು ಉರಿಯಿಂದ ಬೊಬ್ಬೆ ಇಡುತ್ತಿರುವ ಯೋಗಿಯಂತಾಯಿತು ರಾಯರ ಪರಿಸ್ಥಿತಿ ಅವರು ಹಾಗೆಯೇ ಕುರ್ಚಿಯ ಮೇಲೆ ಕುಸಿದರು.

"ಅಯ್ಯೋ, ನನ್ಮಾನ ನಾಯ್ಗಿಂತ ಕಡೆ ಆಗ್ಹೋಯ್ತಲ್ಲಾ........ ನೀನು ತಾನು ಅಂತ ಏಕವಚನದಲ್ಲಿ ಅಂದ್ಬಿಟ್ಟಲ್ಲಾ ........ ಅದೂ, ಅವತ್ತು ಪಾರ್ಕಿನಲ್ಲಿ ತಾನಾಗೆ ಬಂದು ನನ್ನನ್ನು ನಯವಾಗಿ, ನಮ್ರವಾಗಿ ಕೇಳ್ಕೊಂಡು ವಿವಾಹ್ವಾಗಿ ಈಗ ನನ್ಮೇಲೇ ಏಕವಚನ ಪ್ರಯೋಗ ಮಾಡ್ಬಿಟ್ಟಲ್ಲಾ. ಜೀವನಾಂಶ್ದಲ್ಲಿ ಬರ್ಕೊಡ್ತಾಳಂತೆ ಪಾಪ್ರುಂಡೆ ........ ಅಯ್ಯೋ ನನ್ನ ದುರದೃಷ್ಟವೆ! ನಾನು ಅವ್ಳಿಗೆ ಮಾಡಿದ ಮಹಾಪರಾಧವಾದರೂ ಏನು?........ಅಯ್ಯೋ........ಇನ್ನು ಸಮಾಜದಲ್ಲಿ ನಾನು ಹೇಗೆ ಬಾಳಲಿ? **ಹೇಗೆ? ಹೇಗೆ? ಹೇಗೆ? ? ? ?**"

ಸ್ವಲ್ಪ ಹೊತ್ತಾದ ಮೇಲೆ ರಾಯರು ತಮ್ಮ ದೇಹವನ್ನು ಹೊರಲಾರದೆ ಹೊತ್ತುಕೊಂಡು ತಮ್ಮ ಕೋಣೆಗೆ ಹೋದರು. ರಾಯರದು ಎಷ್ಟೇ ಆಗಲಿ ದೊಡ್ಡ ಸಂಸ್ಕಾರ. ಎಂತಹ ಆಪತ್ಕಾಲದಲ್ಲೂ ಅವರ ಮನಸ್ಸು ವಿಚಾರ ದೃಷ್ಟಿಯನ್ನು ಕಳೆದುಕೊಳ್ಳುತ್ತಿರಲಿಲ್ಲ. ಅಲ್ಪಾವಕಾಶದಲ್ಲೆ ಅವರು ಎಚ್ಚೆತ್ತು "ಹಾಳಾಗ್ಹೋಗ್ಲಿ.... ...ಅವ್ಳು ನನ್ನ ಏನ್ಬೇಕಾದ್ರೂ ಅಂದಿರ್ಲಿ.... ...ಇನ್ಮೇಲೆ ಅವ್ಳ ಹತ್ರ ಸುಳೀದಿದ್ರೆ ಆಯ್ತು ..... ..ಸಮಾಜ್ದಲ್ಲಾದ್ರೂ ತಲೆ ಎತ್ಕೊಂಡು ಓಡಾಡ್ತಿರ್ಬಹುದು ........ ಯಾರಾದ್ರೂ 'ತಮ್ಮ ಇವ್ರೆಲ್ಲಿ ಜೊತೇಗಿಲ್ವಲ್ಲಾ' ಎಂದು ಕೇಳಿದ್ರೆ 'ಅವ್ಳು ಈ ನಡ್ವೆ ಸಾರ್ವಜನಿಕ ಕ್ಷೇತ್ರದಲ್ಲಿ ವಿಪರೀತ ಕೆಲ್ಸ ಹಂಚ್ಕೊಂಡ್ಬಿಟ್ಟಿದಾಳೆ' ಎಂದು ಸಮರಿಸಿಬಿಟ್ಟರೆ ಆಯ್ತು" ಎಂದು ವಿವೇಕ ತಂದುಕೊಂಡರು. ಮನಸ್ಸಿಗೆ ಬೇಜಾರಾಗಿದ್ದುದರಿಂದ ರಾಯರು ಒಂದು

ವಾರ ರಜಕ್ಕೆ ಬರೆದು ಹಾಕಿದರು.

ಇದಾಗಿ ಮೂರು ದಿವಸಗಳು ಕಳೆದುವು. ಮೂರನೆಯ ದಿನ ಮಧ್ಯಾಹ್ನ ರಾಯರು ಎಲ್ಲಿಗೊ ಹೋಗಿದ್ದವರು ಮನೆಗೆ ಹಿಂತಿರುಗಿದರು. ಬಾಗಿಲಿನ ಹತ್ತಿರ ಬರುತ್ತಿರುವಲ್ಲೆ, ಯಾವ ಮರ್ಯಾದಸ್ಥನನ್ನಾದರೂ ಕೆಣಕಿ ಸಿಟ್ಟಿಗೆಬ್ಬಿಸುವಂಥ ಗಂಡಸೊಬ್ಬನ ವಿಕಾರ ನಗೆ ಅವರ ಪತ್ನಿಯ ಕೋಣೆಯಿಂದ ಕೇಳಿಬಂತು. ರಾಯರಿಗೆ ವಿಪರೀತ ಸಿಟ್ಟು ಬಂತು. "ಅವಳ್ಗಿಷ್ಟೇ ಜೀವನಾಂಶದ ಆಸ್ತಿ ಇರ್ಲಿ........ಈ ಮನೆ ಅಂತೂ ನಂದೇ ........ನನ್ಮನೇಲಿ ಈ ರೀತಿ ನಗೋನು, ಅವನ್ಯಾರೇ ಆಗ್ಲಿ, ದೂಡ್ಬಿಡ್ಬೇಕು." ಎಂದು ರಾಯರು ಉದ್ರೇಕದಿಂದ ತಮ್ಮ ಪತ್ನಿಯ ಕೋಣೆಯ ಕಡೆ ಹೊರಟರು. ಆದರೆ, ಅಷ್ಟರಲ್ಲೆ ಅವರ ಮನಸ್ಸು ಅವರನ್ನು ತಡೆದು ನಿಲ್ಲಿಸಿ "ಬಲವಂತೂ, ದುಡುಕ್ಬೇಡಪ್ಪಾ........ಕಣ್ಮುಂದಿರೋ ಹೆಂಟೇಗೊದ್ದನ್ನ ಹೊಡ್ಯೋ ಆತುರ್ದಲ್ಲಿ ಹಿಂದೆ ಹೊಂಚ್ಹಾಕ್ತಿರೋ ಹಾವ್ನ ಮರೀಬೇಡ" ಎಂದು ಎಚ್ಚರಿಸಿತು. ರಾಯರು ತಮ್ಮಲ್ಲೆ ವಿಚಾರ ಮಾಡಿಕೊಂಡು, "ನಿಜ" ಎಂದುಕೊಂಡು, ಯಾವ ಗಲಾಟೆಯನ್ನೂ ಮಾಡದೆ ತಮ್ಮ ಪತ್ನಿಯ ಕೋಣೆಯ ಕಿಟಕಿಯೊಳಗೆ ಇಣಿಕಿ ಸಮಾಚಾರವೇನೆಂಬುದನ್ನು ತಿಳಿದು ಬರುವುದಕ್ಕೆ ಮಾತ್ರ ಅತ್ತಕಡೆ ಮೆಲ್ಲನೆ ಹೊರಟರು.

ಕಿಟಕಿಯೊಳಗೆ ಇಣಿಕಿ ನೋಡುತ್ತಿದ್ದಂತೆಯೇ ರಾಯರ ಮುಖ ವಿಕಾರವಾಗಿ ಅವರ ತುಟಿಗಳು ಅದುರಿದುವು. ಅವರ ಪತ್ನಿ—ನಾರೀ ರತ್ನ—ತನ್ನ ಸೋಫಾದ ಮೇಲೆ ಕುಳಿತಿದ್ದಳು. ಪಕ್ಕದಲ್ಲೆ ಒಳ್ಳೆ ಮೈಕಟ್ಟಿನ ಆಸಾಮಿ ಒಬ್ಬ, ಬರೆ ಬರೆ ಬಣ್ಣದ ದಪ್ಪ ಕಂತ್ರಿ ರೇಶ್ಮೆಯ ಉದ್ದವಾದ ಅಂಗಿಯನ್ನು ತೊಟ್ಟು, ಥಳಥಳಿಸುತ್ತಿದ್ದ ಕಂತ್ರಿ ರೇಶ್ಮೆಯ ದೊಗಲೆ ಪೈಜಾಮುವನ್ನು ಹಾಕಿಕೊಂಡು ಅವಳ ಪಕ್ಕದಲ್ಲಿ ಕುಳಿತಿದ್ದ. ಗುನ್ನಂಪಟ್ಟೆಯಿಂದ ಥಳಥಳ ಜೋಡಿಸಿದ್ದ ಹಾರವೊಂದನ್ನು ಅವನು ಕೈಯಲ್ಲಿ ಹಿಡಿದು ಅವಳು ಕೊಡುತ್ತಿದ್ದ 'ಬೀಡ'ಗಳನ್ನು ಜಗಿಯುತ್ತಾ, ಊರಗಲ ಬಾಯಿ ಬಿಡುತ್ತಾ, ಮನೆಯೇ ಕಿತ್ತುಹೋಗುವಂತೆ ವಿಕಾರ

ವಾಗಿ ನಗುತ್ತಿದ್ದ. ನಗುತ್ತಿದ್ದಂತೆಯೆ ಅವನ ಮೈಮೇಲಿದ್ದ ದಪ್ಪ ಜೇಶ್ಮೆ ಆದರುತ್ತಾ ಥಳಥಳಿಸುತ್ತಿತ್ತು.

ಈ ದೃಶ್ಯವನ್ನು ನೋಡಿ ರಾಯರ ಕರುಳು ಕತ್ತಿಂದಿತ್ತ ಹೊರ ಳಿತು. ಅವರ ಹೃದಯ ದುಃಖದಿಂದ ತುಂಬಿ ಬಂತು. ತಾವು ನಿಸ್ಸಹಾಯರೆಂಬುದನ್ನು ಮನಸ್ಸಿಗೆ ತಂದುಕೊಂಡಮೇಲಂತೂ ರಾಯರು ತಮ್ಮನ್ನೇ ಪರಚಿಕೊಳ್ಳೋಣವೆ ಎನ್ನಿಸುವಂಥ ಪರಿಸ್ಥಿತಿ ಯಲ್ಲಿ ಸಿಲುಕಿದರು. ಈ ದೃಶ್ಯವನ್ನು ನೋಡಲಾರದೆ ರಾಯರು ನಡು ದಾರಿಯಲ್ಲಿದ್ದ ಕಂಬದ ಮರೆಯಲ್ಲಿ ನಿಂತು, ಒಳಗೆ ಥಳಥಳಿಸುತ್ತಿದ್ದ ಆಗುಂತಕ ಹೊರಬೀಳುವುದನ್ನೇ ಕಾಯುತ್ತಿದ್ದರು. ಅನೇಕ ಭಾವನೆ ಗಳು ಸುಂಟರ ಗಾಳಿಯಂತೆ ಒಳಗೊಳಗೆ ಏಳತೊಡಗಿದವು. ಆದರೆ ರಾಯರ ಪರಿಪಕ್ವವಾದ ಮನಸ್ಸು ಒಂದೇ ನಿರ್ಧಾರಕ್ಕೆ ಬಂತು.

ಸ್ವಲ್ಪ ಹೊತ್ತಾದ ಮೇಲೆ ಅವರ ಪತ್ನಿ ಥಳಥಳಿಸುತ್ತಿದ್ದ ಆ ಆಜಾನುಬಾಹುವಿನ ಕೈ ಹಿಡಿದು ಕಿಲ ಕಿಲ ನಗುತ್ತಾ ಹೊರಬಿದ್ದಳು.

" ನಡ್ಕೊಂಡ್ಯಾಕ್ಹೋಗ್ಬೇಕು........ಛೆ....ಛೆ....ನನ್ನಾಕಾರ್ನಲ್ಲಿ ಒಂದು ಡ್ರಾಪ್ ಕೊಡ್ತೇನೆ........ನಾನೂ ಹಾಗೇ ತಲೇನ ' ಟ್ರಿಮ್ ಕ್ರಾಪ್ ' ಮಾಡಸ್ಕೋಬೇಕು ... .... ನಿಮ್ಗೆ ಡ್ರಾಪ್ ಕೊಟ್ಬಿಟ್ಟು ಅಲ್ಲಿಂದ ' ಸೆಲೂನ್ ಡಿ ಸಾಫ್ 'ಗೆ ಹೋಗ್ತೇನೆ."

" ಬೇಡೀ ಇವ್ರೆ........ನನ್ಗೆ ನಡ್ಕೊಂಡ್ಹೋಗೇ ಅಭ್ಯಾಸ ಹುಟ್ದಾ ಗಿಂದ....ನೀವು ನನ್ನ ' ನೀನು ' ಅಂತ ಕೂಗ್ಬೇಕು....ಹೇಳಿದೀನಿ.... ಬುಚ್ಚಾಗ್ಳೆಲ್ಲಾ ನನ್ನ ನೀನು ತಾನು ಅಂತ ಕೂಗ್ತಾರೆ....ಇನ್ನು ನೀವು ...." ಎನ್ನುತ್ತಾ ಆ ಆಗುಂತಕ ಒಡ್ಡೊಡ್ಡಾಗಿ, ಅಕಾರಣವಾಗಿ, ನಗುತ್ತಾ ವಾತ್ತೂ ಥಳಥಳಿಸಿದ.

ಅನಂತರ ಆ ನಾರೀಮಣಿ ಅವನೊಡನೆ ಅಸಾಧ್ಯವಾಗಿ ಮುದ್ದು ಗುರಿಯುತ್ತಾ ಆಡಿದ ಮಾತುಗಳು ರಾಯರ ಕಿವಿಗೆ ಬೀಳಲೇ ಇಲ್ಲ. ಇಷ್ಟನ್ನು ಕೇಳಿದ್ದೇ ಸಾಕು, ರಾಯರು ಧರೆಗಿಳಿದುಬಿಟ್ಟರು. ಇನ್ನು ಅವಳನ್ನು ಹಿಂಬಾಲಿಸುವಷ್ಟು ಚಿತ್ತಸ್ಥೈರ್ಯ, ಪಾಪ, ರಾಯರಿಗೆಲ್ಲಿ

ಬರಬೇಕು !

ಎರಡು ಘಂಟೆಗಳಾದ ಮೇಲೆ ಆ ನಾರೀರತ್ನ ತನ್ನ ಕೋಣೆಗೆ ಹಿಂತಿರುಗಿದಾಗ ಬಾಡಿಹೋಗಿದ್ದ ಹೂವಿನಂತೆ ರಾಯರು ಸೋಫಾದ ಮೇಲೆ ಕುಳಿತಿದ್ದರು. ಅವರನ್ನು ನೋಡುತ್ತಲೇ ಅವಳು ಸಿಡುಗುಟ್ಟುತ್ತಾ "ಏನ್ರೀ, ಏನು ಕೂತ್ಬುಟ್ರಲ್ಲಾ....ಒಳ್ಳೆ ನೀರ್ನಲ್ಲಿ ಅದ್ದಿ ತೆಗ್ದ ಇಲೀ ಹಾಗೆ" ಎಂದು ಮುಖ ಗಂಟಿಕ್ಕಿ ಕೈಚೀಲದಿಂದ, ಆ ತಿಂಗಳ 'ಫ್ಯಾಷನ್' ಆಗಿದ್ದ ಒಂದೂಕಾಲಡಿ ಉದ್ದದ "ಹೆಡೆ ಹಾವಿನ ಬ್ರೋಚ"ನ್ನು ಹೊರತೆಗೆದು ಅದನ್ನು ತಲೆಗೆ ತಗುಲಿಸಿಕೊಂಡಳು.

ರಾಯರಿಗೆ ತಡೆಯಲಾಗಲಿಲ್ಲ. "ನನ್ನ ಸರ್ವನಾಶ ಮಾಡ್ಬೇಕು ಅಂತ ಮಾಡ್ಕೊಂಡಿದ್ದೀನೆ ನೀನು....ಅವನ್ಜೊತೆ ಹಾಳಾಗ್ಹೋಗಿದ್ಯಲ್ಲ" ಎಂದು ಮೆಲ್ಲಗೆ ಹೇಳಿದರು. ಒಬ್ಬರನ್ನು ಹೊರಗೆ ಆಗಲಿ, ಒಳಗೆ ಆಗಲಿ ಅನ್ನುವುದು ಆಡುವುದು ರಾಯರ ಹೆಸರು ಹೇಳಿದವರಿಗೂ ಬರುತ್ತಿರಲಿಲ್ಲ. ಆದರೆ ಈಗ ಸನ್ನಿವೇಶಗಳು ಒಂದರ ಮೇಲೊಂದು ಅವರ ಮೇಲೆ ಬಿದ್ದು ಅವರ ಪ್ರಕೃತಿ ಅವರಿಗೇ ಹೊಸದಾಗಿತ್ತು. ಹುಳಿಯಾದ ಮಾತನ್ನು ಆಡಿದರೂ, ಅವರು ಅದನ್ನು ಮೆಲ್ಲಗೆ ಹೇಳಿದ್ದರಿಂದ, ಅದು ಸಪ್ಪಗೇ ಕಂಡಿತು.

ರಾಯರ ಮಾತು ಕೇಳಿದ್ದೇ ತಡ ಆ ನಾರೀಮಣಿ ಸಿಟ್ಟಿನಿಂದ "ಓಹೋ, ನಾಲ್ಗೇ ಕೆರೀತಾ ಇದ್ಯೇನ್ರೀ ನಿಮ್ಗೆ....ಕೇಳ್ರೀ, ಎಲ್ಲಾ ಹೇಳ್ಬಿಡ್ತೀನೆ........ನಾನು ಇತ್ತೀಚೆಗೆ ಸಮಾಜ್ದಲ್ಲಿ ಸಾರ್ತಿರೊ ಆದರ್ಶ ವನ್ನು ಸಾಧಿಸೋದಕ್ಕೆ ಆ ಗೂಂಡನ್ನ ಆಚೆನಾಳಿದ್ದು ವಿವಾಹ್ವಾಗ್ತೀನೆ, ನಿಮ್ಮನ್ನ ವಿಚ್ಛೇದನ ಮಾಡ್ಬಿಟ್ಟು....ಅವ್ನು ಎರಡವ್ಕಾಶಗಳ್ನ ಉಪಯೋ ಗಿಸ್ಕೊಂಡಿರೋ ಗೂಂಡ....ಈ ಚೀಟೀನೂ ತೊಗೋಳಿ (ರಾಯರ ಕಡೆ ಚೀಟಿಯನ್ನು ಎಸೆದು) ...ನೋಡ್ಕೋಳಿ, ಅದ್ರಲ್ಲಿ ಅವ್ನ ವಿಳಾಸ ಎಲ್ಲಾ ಬರ್ದಿದೆ...ಲೋಕೋ ಭಿನ್ನರುಚಿಃ ..ಎಲ್ಲವನ್ನೂ ಅನುಭವಿಸಿ, ಎಲ್ಲದರಲ್ಲೂ ಸಾಮರಸ್ಯ ತೋರುವುದೇ ಜೀವನದ ಪರಮ ಆದರ್ಶ....ಸರಿ ಎಲ್ಲಾ ಕೇಳ್ಕೊಂಡ್ಯೋ ಇಲ್ವೋಪ್ಪಾ ...ಇನ್ನು ಸದ್ಯ ನಿನ್ನ ಆ ಹಾಳು ಹ್ಯಾಪೆ

ಮುಖ ಹೊತ್ಕೊಂಡು, ನಿನ್ಕೋಣೇಗ್ಹೊರಟೋಗಪ್ಪ." ಎಂದಿದ್ದೂನೂ ಕನ್ನಡಿಯ ಮುಂದೆ ನಿಂತು ತುಟಿಗೆ ಬಣ್ಣ ಹಚ್ಚಿಕೊಳ್ಳಲಾರಂಭಿಸಿದಳು.

ದುಃಖಾಗ್ನಿಯಲ್ಲಿ ಸಿಕ್ಕಿ ಬೇಯುತ್ತಿದ್ದ ರಾಯರಿಗ ಏನೂ ತೋಚಲಿಲ್ಲ. "ಹು....ಹು....ಹೌದು....ಅಬ್ಬಾ...." ಎಂದು ಮುಲುಗುತ್ತಾ ಅವರು ಅಲ್ಲಿಂದ ಹೊರಬಿದ್ದರು. ತಮ್ಮ ಕೋಣೆಗೆ ಬಂದು ಕಷ್ಟದಿಂದ ಆರಾಮು ಕುರ್ಚಿಯ ಮೇಲೆ ಕುಳಿತರು:—"ಪಾಪ್ಮುಂಡೆ... ಹಾಳ್ಮುಂಡೆ.... ಆದರ್ಶ್ವಂತೆ....ನನ್ಗತಿ ಏನಪ್ಪಾ ಮುಂದೆ....ವಿಚ್ಛೇದನದ ಪದ್ಧತಿ ಇರೋದ್ರಿಂದ ಅವ್ಳೂ ಒಬ್ಬಳು ಗಣ್ಯಳಾಗಿ ನನ್ಗೆ ಕಂಡ್ಳು....ಇಲ್ದಿದ್ರೆ ಎಂದೋ ಬೀದೀಗ್ಬಂದಿರೋಳು....ಹಾಳ್ವಿಚ್ಛೇದನದ ಪದ್ಧತಿ........ಆಚೆನಾಳಿದ್ದು ಕಳದ್ಮೇಲೆ....ಏನಪ್ಪಾ ನನ್ಗತೀ ? ? ? ? ? " ಎಂದು ಯೋಚಿಸುತ್ತಿರುವಂತೆಯೇ ಅವರ ಮೈಯೆಲ್ಲಾ ನಡುಗಿತು. ಎದುರಿಗೆ ಮೇಜಿನ ಮೇಲೆ ಒಂದು ದೊಡ್ಡ ಜಿರಳೆ ಅಂಗತ್ತನಾಗಿ ಬಿದ್ದು ಒದ್ದಾಡುತ್ತಿದ್ದುದು ರಾಯರಿಗೆ ಕಂಡಿತು. ತಾವು ತೀರದ ದುಃಖದಲ್ಲಿದ್ದರೂ, ಇನ್ನೊಂದು ಪ್ರಾಣಿ ಒದ್ದಾಡುತ್ತಿದ್ದುದನ್ನು ನೋಡಿ ರಾಯರಿಗ ಸಹತಾಪ ಮೂಡಿತು; ಎಷ್ಟೇ ಆಗಲಿ ಅದು ಅವರ ಹುಟ್ಟು ಸುಗುಣ. ಒದ್ದಾಡುತ್ತಿದ್ದ ದೊಡ್ಡ ಜಿರಳೆಯನ್ನು ಸರಿಮಾಡುವುದಕ್ಕಾಗಿ ಅವರು ಕೈ ಎತ್ತಿದರು. ಆದರೆ ಅವರ ಕೈ ಕನ್ನಡಿಯಲ್ಲಿದ್ದ ತನ್ನ ಪ್ರತಿಬಿಂಬವನ್ನೇ ಮುಟ್ಟಿತು. ಕನ್ನಡಿಯೊಳಗೆ ಅವರ ಚಿತ್ರವೇ ಕಂಡಿತು. ರಾಯರಿಗೆ ಆ ದುಃಖದ ಸಮಯದಲ್ಲೂ ನಾಚಿಕೆಯಾಯಿತು. ಅವರು ರಸಿಕರೇನೋ ಹೌದು, ಕಲಾಕೋವಿದರ ಅಂಶವೂ ಅವರಲ್ಲಿ ಇತ್ತು. ಆದರೆ ಈ ಗಳಿಗೆಯಲ್ಲಿ ಅವರ ಕಲ್ಪನಾಶಕ್ತಿಯೂ ಅವರನ್ನು ಕಾಡಬೇಕೆ !

ಈ ಪರಿಸ್ಥಿತಿಯಲ್ಲಿದ್ದಾಗಲೆ ನ್ಯಾಯಾಸ್ಥಾನದ ಗುಮಾಸ್ತ ಪರಿವಾರ ಸಮೇತನಾಗಿ ಬಂದು ರಾಯರಿಗೆ ಅವರ ಪಾಲಿಗೆ ಬಂದಿದ್ದ 'ಗೌರವದ ಪತ್ರ'ವನ್ನು ಮುಟ್ಟಿಸಿ ಹೋಗಿದ್ದ. ರಾಯರು ಏನುತಾನೆ ಮಾಡುತ್ತಾರೆ! ಆ ಪತ್ರವನ್ನು ತೆಗೆದುಕೊಂಡು ಗುಮಾಸ್ತ ಮುಂದಿಟ್ಟ ಪುಸ್ತಕದೊಳಗೆ ರುಜುಮಾಡಿ ಪುನಃ ಆರಾಮುಕುರ್ಚಿಯಮೇಲೆ ಕುಳಿತುಬಿಟ್ಟರು.

೧೨

ರಾಯರ ಮುಖದಮೇಲೆ ದುಃಖ ಎದ್ದು ಕಾಣುತ್ತಿತ್ತು. ಆದರೂ ಆ ಗುಮಾಸ್ತ—ಲೆಕ್ಕವಿಲ್ಲದಷ್ಟುಸಲ ರಾಯರಿಂದ ಉಪಯೋಗ ಹೊಂದಿದ್ದ ಆ ಗುಮಾಸ್ತ—ರಾಯರನ್ನು ಕುರಿತು, "ರಾಯರೆ, ಸದಾಕಾಲವೂ ಪ್ರಫುಲ್ಲ ಪುಷ್ಪದಂತೆ ಅರಳಿರುತ್ತಿದ್ದ ನಿಮ್ಮ ಮುಖ ಇಂದೇಕೆ ಬಾಡಿದೆ ?" ಎಂದು ಒಂದು ಮಾತೂ ಕೇಳಲಿಲ್ಲ. ಹೋಗಲಿ, ಆರೀತಿ ಕೇಳುವುದಕ್ಕೆ ಅವನಲ್ಲಿ ಅಷ್ಟು ರಸಜ್ಞಾನ ಇಲ್ಲದೆ ಇದ್ದಿರಬಹುದು. ಬಹುದೇನು ! ಒಮ್ಮೆ ಅವನು ಬೆಂಡಿನಿಂದ ಮಾಡಿದ್ದ ಮೊಗ್ಗಿನ 'ಜಂಪೆ'ಯನ್ನೇ ತೆಗೆದುಕೊಂಡು ಹೋಗಿ "ಇದೊ, ಈ ಮಲ್ಲಿಗೆ ಮೊಗ್ಗಿನ ಹಾರವನ್ನು ತೆಗೆದು ಒದ್ದೆ ಬಟ್ಟೆಯಲ್ಲಿಡು....ಬೆಳಗಿನ ಹೊತ್ತಿಗೆ ಅರಳುತ್ತೆ....ಮುಡಿಯ ಬಹುದು" ಎಂದು ತನ್ನ ಪತ್ನಿಗೆ ಠೀವಿಯಿಂದ ಹೇಳಿ, ಅದರ ಫಲವಾಗಿ ಆದ ರಾಮಾಯಣದಿಂದ ಎರಡುದಿನ ಹೋಟಲಿನಲ್ಲಿ ಊಟ ಮಾಡಬೇಕಾಗಿ ಬಂದಿತ್ತು. ಹೋಗಲಿ, ಆ ಮಾತೇಕೆ. "ರಾಯರೆ, ಏನೋ ಯೋಚಿಸುತ್ತಿರುವಂತಿದೆಯಲ್ಲಾ" "ರಾಯರೆ, ಮೈಯಲ್ಲಿ ಚೆನ್ನಾಗಿಲ್ಲವೆಂದು ತೋರುತ್ತೆ" ಈ ರೀತಿಯಾದರೂ ಅವನು ಏನನ್ನೂ ಕೇಳಲಿಲ್ಲ—ಬದಲಾಗಿ ರಾಯರನ್ನು ಬೈಯುತ್ತಾ, ತನ್ನ ಪರಿವಾರವನ್ನೂ ಶಪಿಸುತ್ತಾ, ತನ್ನ 'ವಾಕಿಂಗ್ ಸ್ಟಿಕ್ ಬಾರ್ಡರ್' ಸಮಸ್ಯೆಯೇ ಪ್ರಪಂಚದ ಸಮಸ್ಯೆಯೆಂಬ ದುರಭಿಮಾನದಿಂದ ಅವನು ರಾಯರ 'ಬಂಗಲೆಯಿಂದ' ಹೊರಟುಹೋದ—ಅಲ್ಪ! ಅವನಿಗೆಲ್ಲಿ ಬಂದೀತು ದೊಡ್ಡತನ! "ಹಾವಿಗೆ ಜೇನುತುಪ್ಪ ಸಕ್ಕರೆ ಉಣಿಸಲು ಕೋರೆಹಲ್ಲಿನ ವಿಷ ಬಿಟ್ಟೀತೆ" ಎಂದು ಜ್ಞಾನಿಗಳು ಹೇಳಿದ್ದಾಗೆ, ಅವನಿಗೆಲ್ಲಿ ಬಂದೀತು ದೊಡ್ಡತನ !

ತಮ್ಮ ಪಾಲಿಗೆ ಬಂದಿದ್ದ 'ಗೌರವದ ಪತ್ರ'ವನ್ನು ನೋಡುತ್ತಲೆ ರಾಯರ ಮುಖ ಅಜೀರ್ಣದಿಂದ ಖಾರವಾದ ತೇಗನ್ನು ತೇಗಿ ಹುಳಿಯಾಗಿದ್ದ ಮುಖದಂತಾಯಿತು. ಬೆಳಗಿನ ಜಾವ ಐದು ಘಂಟೆಗೆ 'ಮರಣ ದಂಡನೆ' ಎನ್ನುವುದನ್ನು ಓದಿಕೊಂಡ ಮೇಲಂತೂ ಅವರಲ್ಲಿ ಆತಂಕ ಎದ್ದಿತು.

ಅಷ್ಟು ಹೊತ್ತಿಗೆ ಮುಂಚೆ ಮರಣದಂಡನೆ ನೆರವೇರಬೇಕೆಂದು ನ್ಯಾಯಾಧೀಶರು ನಿಶ್ಚಯಿಸಿದ್ದಕ್ಕೆ ಕಾರಣವಿತ್ತು. ನ್ಯಾಯಾಧೀಶರು ಪ್ರತಿನಿತ್ಯವೂ ಹಾಸಿಗೆ ಬಿಟ್ಟು ಏಳುತ್ತಿದ್ದುದು ಎಂಟು ಘಂಟೆ ಹೊಡೆದ ಮೇಲೆ. ಆದರೆ ಅವರದು ದೊಡ್ಡ ಗುಣ. 'ನಾನು ಹೊತ್ತಾಗಿ ಎದ್ದಾಕ್ಷಣ್ವೆ, ಮುಂಚಿತ್ವಾಗಿ ಏಳೋ ಅಭ್ಯಾಸಾನ ನಾನೇಕೆ ಹಳೀಬೇಕು. ಮುಂಚಿತ್ವಾಗಿ ಏಳೋರು ಮುಂಚಿತ್ವಾಗೇ ಏಳ್ಲಿ' ಎನ್ನುವ ವಿಶಾಲ ಮನೋಭಾವ. ಆದ್ದರಿಂದಲೇ ಅವರು ಬೆಳಗಿನ ಜಾವ ಐದು ಘಂಟೆಗೇ ಮರಣದಂಡನೆ ನೆರವೇರಬೇಕೆಂದು ವಿಧಿಸುವ ದೊಡ್ಡ ಮನಸ್ಸು ಮಾಡಿದ್ದು.

ಮೊದಲೇ ಇಕ್ಕಳದಲ್ಲಿ ಸಿಕ್ಕಿಬಿದ್ದಿದ್ದ ಬಲವಂತರಾಯರಿಗೆ ಬೆಳಗಿನ ಜಾವವೇ ಈ ಕೆಲಸ ಬಂದದ್ದು ಬಾಡಿದ್ದ ಹೂವನ್ನು ಅರೆದಂತಾಯಿತು. ಅವರು ರಜವನ್ನೇನೋ ತೆಗೆದುಕೊಂಡಿದ್ದರು. ನಿಜ. ಆದರೆ ಇದು ನ್ಯಾಯಾಸ್ಥಾನದಿಂದ ಬಂದ ಗೌರವ, ಯಾವ ಕಾರಣದಿಂದಲೂ ತಪ್ಪಿಸಿಕೊಳ್ಳಲಾಗದು. ಇಂತಹ ಸನ್ಮಾನ ಒದಗಿ ಬಂದಾಗ, ರಾಜಧಾನಿ ಬಿಟ್ಟು ಬೇರೆ ಊರುಗಳಿಗೆ ತೆರಳಿದ್ದ ಅಧಿಕಾರಿಗಳನ್ನು ಎಷ್ಟೋ ಸಲ ವಿಮಾನದಲ್ಲಿ ಕರೆತಂದದ್ದೂ ಉಂಟು. ನ್ಯಾಯಾಧೀಶರ ಮಾತೆಂದರೆ ಅಷ್ಟು ಬೆಲೆ.

ಮರಣ ದಂಡನೆಯ ಕಾಲಕ್ಕಿಂತ ಮುಕ್ಕಾಲು ಘಂಟೆ ಮುಂಚೆ, ಅಂದರೆ ನಾಲ್ಕೂಕಾಲು ಘಂಟೆಗೇ, ರಾಯರು ಪ್ರಧಾನ ಕಛೇರಿಗೆ ತೆರಳಬೇಕಿತ್ತು. ಅಲ್ಲಿ ಅವರಿಗಾಗಿ ಕಾದಿದ್ದ ಹದಿನಾರು ಜನರ ಪರಿವಾರ, ನಾಲ್ವರು ಪುರಪ್ರಮುಖರು, ಸರ್ಕಾರದ 'ಪಬ್ಲಿಸಿಟಿ ಅಧಿಕಾರಿ' ಮತ್ತು ಪತ್ರಿಕೋದ್ಯೋಗಿಗಳು—ಇವರುಗಳನ್ನು ಹಿಂದೆ ಹಾಕಿಕೊಂಡು, ನೇತ್ರಪ್ರಾಯರಾಗಿ ತಾವು ಮರಣ ದಂಡನೆಯ ಕಾರ್ಯರಂಗವಾದ "ಕಪ್ಪು ಬಂಗಲೆ"ಗೆ ಹೋಗಬೇಕು. ವಿಧಿಸಿದ್ದ ಕಾಲಕ್ಕೆ ಸರಿಯಾಗಿ ಇಪ್ಪತ್ತು ನಿಮಿಷ ಮುಂಚೆ, ಅಂದರೆ, ನಾಲ್ಕೂ ನಲ್ವತ್ತಕ್ಕೆ ಸರಿಯಾಗಿ ಅಪರಾಧಿಯನ್ನು ಕುರಿತು, "ನಿನ್ನ ಕೊನೆಯ ಹೇಳಿಕೆಯನ್ನು ಕೊಡು" ಎಂದು

ಕೇಳಬೇಕು. ತಕ್ಷಣವೆ "ಪಬ್ಲಿಸಿಟಿ ಅಧಿಕಾರಿ" ಗಳು ಅಧಿಕೃತ ಪುಸ್ತಕದಲ್ಲಿ ಅಪರಾಧಿಯ ಕಡೆಯ ಹೇಳಿಕೆಯನ್ನು ಬರೆದು, ಅದು ಸರಿ ಎಂಬುದಕ್ಕೆ ಒಡನಿದ್ದ ನಾಲ್ಕು ಜನ ಪುರಪ್ರಮುಖರ ಸಾಕ್ಷ್ಯ ಹಾಕಿಸಿ ಕೊಳ್ಳಬೇಕು. ಅನಂತರ 'ಕಪ್ಪು ಬಂಗಲೆ'ಯ ಗಡಿಯಾರ ಐದನೆಯ ಘಂಟೆಯನ್ನು ರಾಗವಾಗಿ ಹೊಡೆಯುತ್ತಿರುವಂತೆಯೇ ಅಪರಾಧಿಯನ್ನು ಶೂಲಕ್ಕೇರಿಸಬೇಕು.

ರಾಯರ ಮನಸ್ಸಿಗೆ ಈ ವಿಷಯಗಳೆಲ್ಲಾ ಯೋಚನೆಗೆ ಬರಲೇ ಇಲ್ಲ. ನಾಲ್ಕು ಘಂಟೆಗೇ ಎದ್ದು ಹೊರಡಬೇಕಲ್ಲಾ ಎಂಬ ದುಗುಡವೇ ಅವರಿಗೆ ಕಂಡಿದ್ದು. "ಪತ್ರ"ವನ್ನು ಜೇಬಿನಲ್ಲಿರಿಸಿದ ಮೇಲಂತೂ ಅವರಿಗೆ ಅದರ ಯೋಚನೆ ಸಂಪೂರ್ಣವಾಗಿ ದೂರವಾಯಿತು. ಪುನಃ ಅವರ ಸಮಸ್ಯೆಯೇ ಹೆಡೆಯೆತ್ತಿಕೊಂಡು ಅವರ ಮುಂದೆ ನಿಂತಿತು. ಹಾಗೆಯೇ ಅವರಿಗೆ ಝೋಂಪು ಹತ್ತಿತು.

ರಾಯರು ಅರೆನಿದ್ದೆಯ ಝೋಂಪಿನಿಂದ ಎಚ್ಚೆತ್ತದ್ದು ಸಂಜೆ ಐದರ ಸಮಯಕ್ಕೆ. ಎಡಗೈಯಲ್ಲಿ ಹಿಡಿದಿದ್ದ ಗೂಂಡನ ವಿಳಾಸವನ್ನೊಳಗೊಂಡ ಚೀಟಿ–ಅವರ ಪತ್ನಿ ಕೊಟ್ಟಿದ್ದು–ಇನ್ನೂ ಮುಷ್ಟಿಯಲ್ಲೇ ಇತ್ತು. ಎಚ್ಚೆತ್ತಂತೆಯೇ ರಾಯರಿಗೆ ಅದರ ವಿಷಯ ಥಟಕ್ಕನೆ ನೆನಪಿಗೆ ಬಂತು. ಅದರ ವಿಷಯವಾಗಿ ಕನಸು ಕಂಡಿದ್ದರೋ ಏನೊ! ಚೀಟಿಯನ್ನು ಬಿಚ್ಚಿ ಒಮ್ಮೆ ಓದಿಕೊಂಡರು. ಅವರ ಮುಖದಲ್ಲಿ ಒಂದು ತೆರನಾದ ಸಂಕಟ ಎದ್ದು ಕಂಡಿತು. ವಿಳಾಸವನ್ನು ನೋಡಿದೊಡನೆ ಗೂಂಡನ ಮನೆ ತಮ್ಮ ಮಿತ್ರರ ಮನೆಯ ಪಕ್ಕದಲ್ಲೆ ಇದೆಯೆಂಬುದು 'ಮನೆಯ ನಂಬರ್'ನಿಂದ ಅವರಿಗೆ ಸ್ಪಷ್ಟವಾಯಿತು. ತಮ್ಮ ಮಿತ್ರರು ತಮ್ಮೊಡನೆ ನೆರೆಯ ಗೂಂಡನ ವಿಚಿತ್ರ ಲೀಲೆಗಳನ್ನು ವಿವರಿಸುತ್ತಿದ್ದುದೂ ಅವರಿಗೆ ಆಗ ನೆನಪಾಯಿತು.

ಗಡಿಯಾರದಲ್ಲಿ ಐದೂವರೆ ಘಂಟೆ ಹೊಡೆಯಿತು. ಸ್ನೇಹಿತರನೇಕರು ತಮ್ಮನ್ನು ಅಭಿನಂದಿಸಲು ಸಿಹಿತಿಂಡಿಗಳೊಡನೆ ಬರುತ್ತಾರೆಂಬುದನ್ನು ಯೋಚಿಸುತ್ತಲೆ, ರಾಯರು ಅವರುಗಳಿಂದ ಪಾರಾಗಲು

ಬೇಗಬೇಗ ಬಟ್ಟೆಯನ್ನು ಹಾಕಿಕೊಂಡು ಹೊರಬಿದ್ದರು. ಪಾಳು ಬಿದ್ದಿದ್ದ ರಸ್ತೆಗಳಲ್ಲಿ ಸುತ್ತಾಡಿಕೊಂಡು ಬೇಜಾರಾಗಿ ಅವರು "ಹೊಟೇಲ್ ಡಿ ನಳ"ದ ದೊಡ್ಡ ರಸ್ತೆಗೆ ಬಂದರು.

"ಹೊಟೇಲ್ ಡಿ ನಳ"ದ ಮುಂದೆ ಪತ್ರಿಕೆಗಳನ್ನು ಮಾರುವ ಚೀರುವವರು ಆಗತಾನೆ ಬಿಸಿಬಿಸಿಯಾಗಿ ಹೊರಬಿದ್ದಿದ್ದ "ದೇಶಭ್ರಷ್ಟ ನಾರು ?" ಪತ್ರಿಕೆಯ ಮೂರನೆ ಮುದ್ರಣವನ್ನು ಹಿಡಿದು "ಕೊಲೆಪಾತಕ ಸಿಗೆ ಮರಣ ದಂಡನೆ", "ವಿಶೇಷ ಪೋಲೀಸು ಅಧಿಕಾರಿ ಬಲವಂತ ರಾಯರಿಗೆ ಸನ್ಮಾನ" ಹೀಗೇ ಮುಂತಾಗಿ ಚೀರುತ್ತಾ "ಹೊಟೇಲ್ ಡಿ ನಳ"ವನ್ನು ಪ್ರವೇಶಿಸುತ್ತಿದ್ದ ಮತ್ತು ಅಲ್ಲಿಂದ ಹೊರಬೀಳುತ್ತಿದ್ದ ಜನಗಳನ್ನು ಇರುವೆಗಳು ಬೆಲ್ಲವನ್ನೋ ಪಾದಿಯಲ್ಲಿ ಮುತ್ತುತ್ತಿದ್ದರು. ಕೆಲವರೇನೋ ಪತ್ರಿಕೆಯನ್ನು ಬಹಳ ಆಸಕ್ತಿಯಿಂದ ಕೊಳ್ಳುತ್ತಿದ್ದರು. ಆದರೆ "ಹೊಟೇಲ್ ಡಿ ನಳ"ದ ವಿಶೇಷ ಸಿಹಿ ತಿಂಡಿ "ಮುಸ್ತಿ ಕಡಬನ್ನು ತಿಂದು ಹೊರಬೀಳುತ್ತಿದ್ದ ಕೆಲವರು ಒಂದು ನಮೂನೆ ಮತ್ತಿಗೆ ಆನಂದದಿಂದ ಬಲಿ ಬಿದ್ದು, ಪತ್ರಿಕೆಯನ್ನು ಕೊಳ್ಳುವ ಆಸೆ ಇದ್ದರೂ, ಕೈಯನ್ನು "ಪರ್ಸಿನ" ವರೆವಿಗೂ ಎತ್ತಿ ದುಡ್ಡು ಕೊಡ ಬೇಕಾಗುವುದಕ್ಕೆ ಪೂರ್ವಭಾವಿಯಾಗಿ ಮಾಡಬೇಕಾಗಿದ್ದ ಅಂಗಸಾಧನೆಗೆ ಅಂಜಿ, ಕಂಬಕ್ಕೆ ಒರಗಿ ನಿಂತುಕೊಂಡು, ಪತ್ರಿಕೆಯನ್ನು ಮಾರುತ್ತಿದ್ದ ವರ ಚೀರಾಟದಿಂದಲೇ ಎಷ್ಟು ಸುದ್ದಿ ಸಂಗ್ರಹ ಮಾಡಬಹುದ್ದಾಗಿತ್ತೊ ಅಷ್ಟನ್ನೇ ಕೇಳಿಕೊಂಡು, ಅಲ್ಲಿಂದ ಅಲುತ್ತಾ ಮುಂದುವರಿಯುತ್ತಿದ್ದರು. ಪಾಪ! ಮತ್ತಿನ ಸಮಾಧಿಯನ್ನು ಹೊಕ್ಕ ಮತ್ತಿನ ಯೋಗಿಗಳು! ಅವರೇನುಮಾಡುತ್ತಾರೆ! 'ಹೊಟೇಲ್ ಡಿ ನಳ'ದ 'ಮುಸ್ತಿ ಕಡಬು' ಅಂತಹುದು. ಅಷ್ಟಲ್ಲದೆ ಅಲ್ಲಿನ ಸಾಹಿತಿಗಳೊಬ್ಬರು "ರಾಮಾಯಣದ್ದ ಕಾಲದಲ್ಲಿ ಜನರ ಜೀವನ ಮಟ್ಟ" ಎಂಬ ವಿಚಾರ ಪ್ರಬಂಧ ಒಂದರಲ್ಲಿ "ಆಂಜನೇಯ ಮೂಲಿಕೆಯನ್ನೊಳಗೊಂಡ ಪರ್ವತವನ್ನು ಎತು ವುದಕ್ಕೆ ಮುಂಚೆ "ಹೊಟೇಲ್ ಡಿ ನಳ"ದಲ್ಲಿ ಮಾಡುವಂತಹ 'ಮುಸ್ತಿ ಕಡಬು'ಗಳನ್ನು ಏನಾದರೂ ತಿಂದುಬಿಟ್ಟಿದ್ದಿದ್ದರೆ, ಆಗ ರಾಮಾಯಣ

ದುರಂತವಾಗುತ್ತಿತ್ತು" ಎಂದು ಬರೆದಿದ್ದರೆ!

"ವಿಶೇಷ ಪೋಲೀಸು ಅಧಿಕಾರಿ ಬಲವಂತರಾಯರಿಗೆ ಸನ್ಮಾನ" ಎಂದು ಚೀರುತ್ತಿದ್ದುದು ರಾಯರಿಗೆ ಕೇಳುತ್ತಲೆ ಅವರ ಮುಖ ವಿಕಾರವಾಯಿತು; ಕಪ್ಪಿಟ್ಟಿತು. ಅವರು ಪತ್ರಿಕೆಯನ್ನೇನಾದರೂ ಕೊಂಡು ಅದರಲ್ಲಿ ಪತ್ನೀಸಮೇತರಾಗಿದ್ದ ತಮ್ಮ ಚಿತ್ರವನ್ನು ನೋಡಿ ಕೊಂಡಿದ್ದಿದ್ದರೆ ಆಗ ಏನು ಮಾಡುತ್ತಿದ್ದರೊ ಏನೊ! "ವಯಸ್ಸಿನಲ್ಲಿ ಕಿರಿಯವರಾದರೂ, ಅಧಿಕಾರ ಕ್ಷೇತ್ರದಲ್ಲೂ ಹಾಗೂ ಸಾರ್ವಜನಿಕ ಕ್ಷೇತ್ರದಲ್ಲೂ ತಮ್ಮದೇ ಆದ ಹಿರಿತನವನ್ನು ಕಲ್ಪಿಸಿಕೊಂಡಿರುವ ವಿಶೇಷ ಪೋಲೀಸು ಅಧಿಕಾರಿ ಬಲವಂತರಾಯರ ಪರಿಚಯ ಯಾರಿಗೆ ತಾನೆ ಇಲ್ಲ? ಸದಾ ಮಂದಹಾಸ ಬೀರುತ್ತಾ, ಎಲ್ಲರೊಡನೆಯೂ ಹರ್ಷದಿಂದ ಸಕ್ಕರೆಯಂತೆ ಬೆರೆಯುವ, ಬಲವಂತರಾಯರ ಸರಳ ಹಾಗೂ ಸರಸವಾದ ವ್ಯಕ್ತಿತ್ವದ ಮಹತ್ವವಂತೂ ಅವರೊಡನೆ ಬೆರೆತವರಿಗೇ ಗೊತ್ತು........ಹೆಂಗಿಸಿನ ಆದರ್ಶಕ್ಕೇ ಓಂಕಾರ ಸ್ವರೂಪಿಣಿ ಯಂತಿರುವ ನಾರೀರತ್ನವನ್ನು ತಮ್ಮವರನ್ನಾಗಿ ಮಾಡಿಕೊಂಡಿರುವ ಬಲವಂತರಾಯರ ದಾಂಪತ್ಯ ತನ್ನದೇ ಆದ ಒಂದು ವಿಶಿಷ್ಟ ಸಿದ್ಧಿ ಯನ್ನು ಪಡೆದಿದೆ....ಈ ಸಂತೋಷದ ಸಮಯದಲ್ಲಿ 'ದೇಶಭ್ರಷ್ಟನಾರು?' ತನ್ನ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಬಲವಂತರಾಯರಿಗೂ, ಲೇಡಿ ಬಲವಂತರಾಯರಿಗೂ ವ್ಯಕ್ತಪಡಿಸುವುದಲ್ಲದೆ ಇಂತಹ ಇನ್ನೂ ನೂರಾರು ಸನ್ಮಾನಗಳು ಅವರದಾಗಲೆಂದು ಹಾರೈಸುತ್ತೆ........" ಇದೇ ಮುಂತಾಗಿ ಅವರ ಚಿತ್ರದ ಕೆಳಗೆ ಬರೆದಿದ್ದ ಲೇಖನವನ್ನು ಓದಿಬಿಟ್ಟಿದ್ದ ರಂತೂ ರಾಯರಿಗೆ ಹುಚ್ಚೇ ಹಿಡಿದುಬಿಡುತ್ತಿತ್ತೊ ಏನೊ!

ರಾಯರಿಗೆ ಮುಂದುವರಿಯುವ ಧೈರ್ಯ ಬರಲಿಲ್ಲ. "ಹೊಟೇಲ್ ಡಿ ನಳ" ದ ವರೆವಿಗೂ ಬರದೆ, ಅವರು ಹಿಂತಿರುಗಿದರು. ಸದಾ ಹರ್ಷಚಿತ್ತರಾಗಿರುತ್ತಿದ್ದ ಅವರ ಮುಖದಲ್ಲಿ ಈಗ ಪ್ರೇತಕಳೆ ಸುರಿಯು ತ್ತಿತ್ತು. ಬೆವರು ಹರಿಯುತ್ತಿತ್ತು. ಹತ್ತಿರದಲ್ಲಿದ್ದ ಸಣ್ಣ ಪಾರ್ಕಿನ ವರೆವಿಗೂ ಬಲವಂತರಾಯರು ತಮ್ಮ ದೇಹವನ್ನು ಬಲವಂತವಾಗಿ

ಹೊತ್ತುಕೊಂಡು ಅಲ್ಲಿ ದೊಪ್ಪೆಂದು ಹುಲ್ಲಿನ ಮೇಲೆ ಕೂಡುವುದ ರಲ್ಲಿದ್ದರು. ಅಷ್ಟರಲ್ಲೇ ಅಲ್ಲಿ ತಗುಲಿಸಿದ್ದ 'ಯಾರೊಬ್ಬರಿಗೂ ಸೇರದ, ಎಲ್ಲರಿಗೂ ಒಟ್ಟಾಗಿ ಸೇರಿದ್ದ' "ರೇಡಿಯೊ"ದಿಂದ "ಅಪರಾಧಿಗೆ ಮರಣ ದಂಡನೆಯನ್ನು ವಿಧಿಸಲಾಯಿತು........ವಿಶೇಷ ಪೋಲೀಸು ಅಧಿಕಾರಿ ಬಲವಂತರಾಯರ ನೇತೃತ್ವದಲ್ಲಿ........" ಹೀಗೆಂದು ಹೇಳುತ್ತಿದ್ದ ಸುದ್ದಿ ಎಲ್ಲಕಡೆಗಳಲ್ಲೂ ತಗುಲಿಸಿದ್ದ "ಲೌಡ್ ಸ್ಪೀಕರ್"ಗಳ ಮೂಲಕ ಪಾರ್ಕನ್ನೆಲ್ಲಾ ತುಂಬುತ್ತಿತ್ತು. ಅದನ್ನು ಕೇಳುತ್ತಲೆ ಹುಲ್ಲಿನ ಮೇಲೆ ಕುಳಿತುಕೊಳ್ಳಬೇಕೆಂದಿದ್ದ ರಾಯರ ಕಣ್ಣಿಗೆ ನೆಲದ ಮೇಲೆ ಸೊಂಪಾಗಿ ಹಾಸಿದ್ದ ಹಸುರು ಹುಲ್ಲು ಕುಣಿದಾಡುತ್ತಿರುವ ಸೂಜಿಗಳಂತೆ ಕಂಡಿತು. ಅವರು ಕಿವಿಯನ್ನು ಮುಚ್ಚಿಕೊಂಡು ಅಲ್ಲಿಂದ ಕಾಲುದಾರಿಯೊಂದನ್ನು ಹಿಡಿದು ಮನೆಯ ಕಡೆ ತೆರಳಿದರು. ಕತ್ತಲು ಕವಿದು ಆಗಲೆ ಎಷ್ಟೋ ಹೊತ್ತಾಗಿತ್ತು.

ತಮ್ಮ ಕೋಣೆಗೆ ಬಂದು ಆರಾಮ ಕುರ್ಚಿಯಲ್ಲಿ ಕುಳಿತು ಕೊಳ್ಳುತ್ತಲೆ, ರಾಯರು ಒಡನೆ ತಂದಿದ್ದ ಅನೇಕ ಯೋಚನೆಗಳು ಹಾವು–ಚೇಳುಗಳಂತೆ, ಹುಲಿ–ಕರಡಿಗಳಂತೆ ಕೋಣೆಯನ್ನೆಲ್ಲಾ ತುಂಬಿ ಅವರನ್ನು ಚಿತ್ರಹಿಂಸೆಗೆ ಗುರಿಮಾಡಿದುವು.

ಸಂಕಟದ ಪರಮಾವಧಿಯಲ್ಲಿ ಸಿಕ್ಕಿಬಿದ್ದಿದ್ದ ರಾಯರನ್ನು ಕುರಿತು ಅವರ ಸುಸಂಸ್ಕೃತವಾದ ಮನಸ್ಸು ಹಠಾತ್ತಾಗಿ ಹೇಳಿತು :—"ಬಲ ವಂತೂ, ನಿನ್ನ ಬಟ್ಟೆ ಒಳ್ಗೆ ಸೇರ್‍ಕೊಂಡಿರೋ ಹಾವ್ಗೆ ಹಾಲುಣಿಸಿ, ನೀನು ತಪ್ಪಿಸ್ಕೊಳ್ಳೊ ಮಾರ್ಗ ನೋಡು"

ಒಣಗಿ ಓಟಿಗರಿಯಾಗಿರುವ ತುಟಿ ನೀರನ್ನು ನೋಡಿ ಬಾಯ್ಬಿಟ್ಟಂತೆ ರಾಯರು "ಢ" ಎಂದರು. "ಹೂ, ಬಲ್ವಂತೂ," ಅವರ ಮನಸ್ಸು ಮುಂದುವರಿಸಿತು, "ಆ ಗೂಂಡನ್ನೇ ನೋಡಿ, ಅವನ ಹತ್ರೇ ನಿನ್ನ ಕಷ್ಟ ಸುಖ ಹೇಳ್ಕೊಂಡು, ಅವನ್ಗೇ ದುಡ್ಡೋ ಕಾಸೋ ಕೊಟ್ಟು . ...." ರಾಯರಿಗೆ ಹೋದ ಜೀವ ಬಂದಂತಾಯಿತು. ಗಡಿಯಾರದ ಕಡೆ ನೋಡಿದರು. ಹತ್ತು ಘಂಟೆಗೆ ಹತ್ತು ನಿಮಿಷವಿತ್ತು.

ಕಾಲುದಾರಿಯಲ್ಲಿ ನಡೆದು ರಾಯರು ಗೂಂಡನ ಮನೆಯನ್ನು ತಲಪುವ ವೇಳೆಗೆ ಘಂಟೆ ಹನ್ನೊಂದರ ಹತ್ತಿರಕ್ಕೆ ಬಂದಿತ್ತು. ರಾಯರು ಅವನ ಮುರುಕು ಮನೆಯನ್ನು ನೋಡುತ್ತಾ ಅವನನ್ನು ಕರೆಯುವ ಪ್ರಯತ್ನ ಮಾಡುತ್ತಿರುವಲ್ಲೆ ಗೂಂಡ ಥಳಥಳ ಮಿಂಚುತ್ತಿದ್ದ ಜರಿ ಟೋಪಿಯನ್ನು ಹಾಕಿಕೊಂಡು ಏತಕ್ಕಾಗಿಯೊ ಬಾಗಿಲು ತೆರೆದು ಈಚೆ ಬಂದ. ರಾಯರಿಗೆ ಇದರಿಂದ ಎಷ್ಟೋ ಉಪಸಮಸ್ಯೆಗಳು ನಿವಾರಣೆ ಯಾದುವು. ಅವನು ಈಚೆಗೆ ಬಂದಿದ್ದೇ ತಡ ಅವರು ಅವನ ಹತ್ತಿರ ಹೋಗಿ, "ಅಪ್ಪಾ, ಸ್ವಲ್ಪ ನಿನ್ನೊಡನೆ ಹೇಳಿಕೊಳ್ಳುವುದಿದೆ, ಪಕ್ಕದ ಮೈದಾನಕ್ಕೆ ಬಾ" ಎಂದರು. ಅದನ್ನು ಕೇಳುತ್ತಲೆ ಗೂಂಡ ಒಮ್ಮೆ "ಆ!" ಎಂದು ತಕ್ಷಣ "ನನ್ಗೆಂಥಾ ಭಯ ಅಲ್ಲಿಗೇ ನಡೀರಿ" ಎಂದ. ಮೈದಾನ ಸೇರಿದ ಕೂಡಲೆ ತಮ್ಮ ಎತ್ತರಕ್ಕೂ ನಿಂತುಕೊಂಡು ಗೂಂಡನ ತೋಳುಗಳನ್ನು ಹಿಡಿದು, "ನಾನು ಬಲವಂತರಾಯ, ಅವ್ಳ ಗಂಡ.... ನನ್ವಂಶ ದೊಡ್ಡದು........ಅವ್ಳ ಹವ್ಯಾಸ ಬಿಟ್ಟು ನೀನು ನನ್ನ ಉದ್ಧಾರ ಮಾಡಿದ್ರೆ ನಿನ್ಗೆ ಏನ್ಬೇಕಾ........" ಎಂದು ರಾಯರು ಅಂಗಲಾಚುವ ದನಿಯಲ್ಲಿ ಹೇಳುತ್ತಿರುವಲ್ಲೆ ಆ ಗೂಂಡ ತನ್ನ ತೋಳುಗಳಿಂದ ರಾಯರನ್ನು ಒಂದೇ ನಿಮಿಷದಲ್ಲಿ ಕೊಡವಿ, "ವಾರೇ ಅಮ್ಮಾ........ನನ್ನ ಪುಸ್ಲಾಯಿಸ್ಬುಟ್ಟು ಅವಳ್ನ ಉಳುಸ್ಕೊಳ್ಳೋಕ್ನೋಡ್ತ್ಯಾ........ಅವ್ಳು ದೊಡ್ಡ ಥೈಲಿ ತರ್ತಾಳೆ........ರೂಪಾಯಪ್ಪ ಮೊನ್ನೆ ಕಟ್ಸಿರೋ ಬಂಗ್ಲೆ ಖರೀದಿ ಮಾಡಿ ನಾವು ಮೋಜ್ಮಾಡ್ತೀವಿ....ಅದನ್ನ ತಪ್ಸಾಕ್ಬಂದ್ಯಾ.... ವಾರೇ ಅಮ್ಮಾ........ಕಿಲಾಡಿ ಲೈ........ಲ್........ಬೈ........ ಲ........ಲ........" ಎಂದು ಮಾತಿನಲ್ಲೇ ಚಾವುಟಿಯ ಪ್ರಯೋಗ ಮಾಡ್ಬಿಟ್ಟ. ರಾಯರು ಅವನು ಮಾತಿಗೆ ಶುರು ಮಾಡಿದ್ದೆ ತಡ, ಬಾಣವನ್ನು ಕಂಡ ಜಿಂಕೆಯಂತೆ ಓಟ ಕಿತ್ತಿದರು.

ಮೇಲುಸಿರಿನಿಂದ ತಮ್ಮ ಕೋಣೆಯೊಳಗೆ ಬಂದು ರಾಯರು ಬಾಗಿಲನ್ನು 'ಫಟೀರ್' ಎಂದು ಮುಚ್ಚಿ ಮಂಚದ ಮೇಲೆ ದೊಪ್ಪೆಂದು

ಬಿದ್ದರು. ಅವರಿಗೆ ಆಸೆ-ನಿರಾಸೆಗಳ ಗೊಡವೆಯೇ ಬೇಕಾಗಿರಲಿಲ್ಲ. ಗೂಂಡನಿಂದ ಓಟ ಕಿತ್ತಿದಾಗಲೇ ತಮ್ಮ ಮೇಲಿನ ಅಭಿಮಾನ ಸಂಪೂರ್ಣವಾಗಿ ತೊರೆದುಹೋಗಿತ್ತು. ಅವರಿಗೆ ತಮ್ಮಲ್ಲೇ ಹೇಸಿಗೆಯ ಭಾವನೆಯುಂಟಾಗಲು ಮೊದಲಾಯಿತು. ಛಟ್ಟನೆ ಎದ್ದು ಎದುರಿಗಿದ್ದ ನಿಲುವು ಕನ್ನಡಿಯನ್ನು ಅವರು ಮುಗಚಿ ಹಾಕಿದರು. ಮೇಜಿನ ಮೇಲಿದ್ದ ಕನ್ನಡಿಯನ್ನು ನೆಲದ ಮೇಲೆಸೆದು ಅದು ಚೂರು ಚೂರಾದದ್ದನ್ನು ನೋಡಿ ಜೋರಾಗಿ ಗಹಗಹಿಸಿ ನಕ್ಕರು. ಗೋಡೆಯ ಮೇಲೆ ಅವರ ನೆರಳೂ ನಗುತ್ತಿದ್ದುದು ಅವರಿಗೆ ಕಂಡಿತು. ತಕ್ಷಣವೇ ಆವೇಶದಿಂದ ತಮ್ಮ ಬಲವನ್ನೆಲ್ಲಾ ಕೈ ಮೇಲೆ ಹಾಕಿಕೊಂಡು ಅವರ ನೆರಳನ್ನು ಅವರೇ ಬಡೆದರು. ಅವರ ರಟ್ಟೆ ಉಳುಕಿತು. ಅಂಗೈ ತರಚಿಕೊಂಡು ಕೆಂಪಾಯಿತು. ಅದನ್ನೆ ನೊಡುತ್ತಾ ಅವರು ಹುಚ್ಚು ನಗೆ ನಕ್ಕರು. ಪುನಃ ಅವರ ನೆರಳು ನಕ್ಕಿದ್ದು ಕಂಡಿತು. ರಾಯರ ಮುಖ ಸಿಟ್ಟಿನಿಂದ ವಿಕಾರವಾಯಿತು. ಕೂಡಲೆ ಅವರು ಪಕ್ಕಕ್ಕೆ ನೆಗೆದು "ಸ್ವಿಚ್ಚ"ನ್ನು ಆರಿಸಿಬಿಟ್ಟರು. ಕತ್ತಲಿನಲ್ಲಿ ಆರಾಮ ಕುರ್ಚಿಯ ಮೇಲೆ ಕುಳಿತುಕೊಳ್ಳಲು ಹೋಗಿ ನೆಲದ ಮೇಲೆ ಕುಸಿದರು. ಅವರಿಗೆ ಚುಚ್ಚಿಕೊಂಡ ನಾಲ್ಕಾರು ಗಾಜಿನ ಚೂರುಗಳ ಅರಿವು ಅವರಿಗೆ ಆಗಲೇ ಇಲ್ಲ. ಪಾಪ! ನೂರಾರು ಚೂರಿಗಳು ಅವರ ಹೃದಯವನ್ನೆ ಇರಿಯುತ್ತಿರಬೇಕಾದರೆ, ನಾಲ್ಕು ಗಾಜಿನ ಚೂರುಗಳು ಅವರ ಮೈಗೆ ಚುಚ್ಚಿಕೊಂಡರೆ ಅವರಿಗೆ ಹೇಗೆತಾನೆ ಗೊತ್ತಾಗಬೇಕು!

"ಇನ್ನು ಸ್ಮಶಾನದಲ್ಲೇ ಶಾಂತಿ ದೊರಕುವುದು....ಆತ್ಮಹತ್ಯೆಯೇ ಈಗ ಸರಿಯಾದ ಮಾರ್ಗ....'ಡ್ರಾ'ನಲ್ಲಿರುವ ಪಿಸ್ತೂಲೇ ಆಪದ್ಬಂಧು" ಎಂದಿತು ರಾಯರ ಕರುಳು. ತಮ್ಮ ಎರಡು ಕೈಗಳನ್ನೂ ಕೆದರಿದ್ದ ತಲೆಕೂದಲಿನಲ್ಲಿ ಹೂತಿಟ್ಟದ್ದ ರಾಯರಿಗೆ ಜ್ಞಾನೋದಯವಾದಂತಾಯಿತು. ಆದರೆ ಇದ್ದಕ್ಕಿದ್ದಂತೆ ರಾಯರ ಮನಸ್ಸು ಆ ಕತ್ತಲಿನಲ್ಲಿ ಥಳಥಳಿಸಿ ರಾಯರನ್ನು ಲಗಾಮು ಹಾಕಿ ಎಳೆಯಿತು:

"ಬಲ್ವಂತೂ....ನಿನಗ್ಯಾಕೆ ಈ ದುರ್ಬುದ್ಧಿ........ನೀನ್ಯಾಕೆ ಈ

ಕೇಡ್ಕೆಟ್ಟಿ....ಆತ್ಮಹತ್ಯೆ....ಅಬ್ಬಾ!....ಅದನ್ನು ಕನಸಿನಲ್ಲೂ ಯೋಚಿಸ ಬೇಡ....ಬಲ್ವಂತೂ, ಸ್ವಲ್ಪ ಹಾಗೆ ನಿನ್ನ ಮೈ ನೋಡ್ಕೊ....ಆ ಚರ್ಮ ನೋಡು ನಿನ್ನ ಮೈಗೆ ಹೇಗಂಟ್ಕೊಂಡಿದೆ....ಕರ್ಮ ಅನ್ನೋದೂ ಹಾಗೆ ಬಲ್ವಂತೂ, ನಿನ್ನ ಚರ್ಮಕ್ಕೆ ಬಲವಂತ್ವಾಗಿ ಅಂಟಿದ್ದು....ನಿನ್ನ ನೆರಳು ನಿನ್ನ ಹಿಂಬಾಲಿಸಿದಂತೆ ನಿನ್ನ ಕರ್ಮಾನೂ ನಿನ್ನ ಹಿಂಬಾಲಿಸುತ್ತೆ.... "

"ಅಯ್ಯೋ ಹೇಡಿ! ಆತ್ಮಹತ್ಯೆಗೆ ಅಂಜಿದೆಯಾ?" ಎಂದಿತು ಕರುಳು.

"ಎಲ್ಬಂತು ಬಲವಂತೂ!" ಎಂದಿತು ಮನಸ್ಸು, "ನಿನ್ನ ಕರ್ಮಕ್ಕೆ ನೀನೇ ಅಂಜಿ ಅದನ್ನೆದುರಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುವದಕ್ಕಿಂತ ಹೇಡಿತನ ಮತ್ತಾವುದಿದೆ. ಸ್ವಲ್ಪ ಹಾಗೇ ಯೋಚಿಸು ಬಲ್ವಂತೂ.... ನೀನೇನು ಹುಟ್ಟೋಕ್ಮುಂಚೆ ಈ ಗಳಿಗೇಲೆ, ಇಂಥಾ ಕಡ್ಯೇ ಹುಟ್ಬೇಕು ಅಂತ ಸಂಕಲ್ಪ ಮಾಡ್ಕೊಂಡು ಹುಟ್ಟಿದ್ಯಾ? ಛೆ!"

"ಇಲ್ಲ" ಎಂದಿತು ಕರುಳು.

"ನೀನು ಯಾವಾಗ ಸಾಯ್ತಿ ಅನ್ನೋದೂ ನಿಂಗೆ ತಿಳೀದು.... ಹೀಗೆ ಗೊತ್ತು ಗುರಿ ಇಲ್ದೆ. ಹುಟ್ಟೋದು....ಗೂಟ ನೆಟ್ಕೊಂಡು ಇಲ್ಲೇ ಚಿರಸ್ಥಾಯಿಯಾಗಿ ಉಳೀತೀನಿ ಅನ್ಕೊಂಡು ಒಂದಿನ ಕಣ್ಮುಚ್ಕೊ ಳ್ಳೋದು........ಇದು ಯಾರಿಗೆ ಪ್ರೀತಿ ಬಲ್ವಂತೂ........ಬಲ್ವಂತೂ, ಆ ನಿರಾಕಾರ ನಿತ್ಯಾನಂದ ಸ್ವರೂಪ ಬಿಟ್ಟು ಈ ದೇಹದಲ್ಲಿ ಅಡಗಿರೋದೇ ಒಂದು ಪ್ರಾರಬ್ಧ....ಕಂಡ್ಯಾ."

"ಅದಕ್ಕೇ ಆತ್ಮಹತ್ಯೆ ಮಾಡ್ಕೊಂಡು ಈ ಪ್ರಾರಬ್ಧ ದೇಹವನ್ನು ನಾಶಮಾಡ್ಕೋಬೇಕು" ಎಂದಿತು ಕರುಳು.

ಮನಸ್ಸು ದೀರ್ಘವಾಗಿ ನಗುತ್ತಾ ಹೇಳಿತು—"ಅದು ಅಷ್ಟು ಸುಲಭ್ವಲ್ಲ ಬಲ್ವಂತೂ....ಕರ್ಮವೆಂಬ ವಿಷವೃಕ್ಷದ ಚಿಗುರನ್ನು ಮಾತ್ರ ಕಿತ್ತುಹಾಕಬಲ್ಲುದು ಆತ್ಮಹತ್ಯೆ........ಅದರಿಂದ ವಿಷವೃಕ್ಷ ಮತ್ತೂ ಸೊಂಪಾಗಿ ಬೆಳೆಯುತ್ತೆ....ನಿನ್ನ ಪ್ರಾರಬ್ಧ ಮತ್ತೂ ಹೆಚ್ಚಾಗುತ್ತೆ........ ಈ ದೇಹ ಬಿಟ್ಟು ಮತ್ತೂ ನೀಚವಾದ ಇನ್ನೊಂದು ದೇಹದಲ್ಲಿ ಹೋಗಿ ಬೀಳುತ್ತಿ."

"ಈ ಹಾಳು ಪ್ರಾರಬ್ಧವನ್ನು ನಾನೇನು ಬಯಸಿ ಬಯಸಿ ಬಾ ಅಂತ ಕರೆದೆನೇ ?"

ಮನಸ್ಸು ಗಂಭೀರವಾಗಿ ಹೇಳಿತು–"ಹಿಂದುಮುಂದು ಯೋಚಿಸು ಬಲ್ವಂತೂ........ದುರಭಿಮಾನದಿಂದ ಅಂಧನಾಗಿ ನಿನ್ನ ನಿಜಸ್ವರೂಪವನ್ನರಿಯಲು ನಿನಗೇ ಆಗಿಲ್ಲ........ನಿನ್ನ ಕರ್ಮಾನುಸಾರ ಆಗಿಬಂದದ್ದಕ್ಕೆ ನೀನಲ್ಲದೆ ಇನ್ನಾರು ಹೊಣೆ? ನೀನು ಮಾಡಿದ ಕರ್ಮ ನಿನ್ನನ್ನಲ್ಲದೆ ಮತ್ತಾರನ್ನು ಬಲವಂತವಾಗಿ ಬೆನ್ನಟ್ಟುತ್ತೆ ? ನಿನ್ನ ನೆರಳು ನೆರೆಯುವ ನನ್ನು ಹಿಂಬಾಲಿಸೀತೆ ಬಲ್ವಂತೂ ?"

" ಹಾಗಾದರೆ ಈ ಪ್ರಾರಬ್ಧದ ನಿವಾರಣೆ ಹೇಗೆ ?"

" ಸಾಧನೆಯೇ ಪ್ರಾರಬ್ಧ ನಿವಾರಣೆಗೆ ದಾರಿ .......ಪರಮಾನಂದವನ್ನು ಸವಿಯಲು ಹೆದ್ದಾರಿ....ಬಲ್ವಂತೂ, ಕರಟದೊಳಗಿನ ತಿರುಳಂತೆ ನಿನ್ನ ನಿಜವಾದ ಸ್ವರೂಪ ಪ್ರಾರಬ್ಧಕರ್ಮದಿಂದ ಮುಚ್ಚಿದೆ........ನಿನ್ನ ದೇಹಕ್ಕೆ ಆಗುವ ಕಷ್ಟನಿಷ್ಠುರಗಳನ್ನೇ ನಿತ್ಯವೆಂದುಕೊಂಡು, ಕರಟವನ್ನೇ ತಿರುಳೆಂದು ಭ್ರಮಿಸಬೇಡ ಬಲ್ವಂತೂ! ನಿನ್ನ ಪ್ರಾರಬ್ಧವನ್ನು ತೊರೆದುಕೊಂಡು ನೀನು ಆನಂದದ ಸ್ವರೂಪವನ್ನು ಸಾಧನೆ ಮಾಡುವ ಪರಮ ಮಾರ್ಗದಲ್ಲಿ ನಿನ್ನ ಮೇಲಿನ ದುರಭಿಮಾನವನ್ನು ತೊರೆ........ ನಿನ್ನ ದೇಹ ನಿಮಿತ್ತ ಮಾತ್ರವೆಂಬುದನ್ನು ತಿಳಿ....ನಿನ್ನ ಕರ್ತವ್ಯವನ್ನು ಯಾವ ಫಲಾಪೇಕ್ಷೆಯೂ ಇಲ್ಲದೆ ಮಾಡಿ ಮಾನವನಿಗೆ ಹಿರಿದಾದ ಕರ್ಮಯೋಗದ ಮಾರ್ಗವನ್ನು ಹಿಡಿ....ಸಾಧಿಸಿದರೆ ಅದಕ್ಕಾಗಿ ಹಿಗ್ಗಬೇಡ.... ಸಾಧಿಸಲಾಗದಿದ್ದರೆ ಅದಕ್ಕಾಗಿ ಮರುಗಬೇಡ....ನಿನ್ನ ಸಾಧನೆಯನ್ನು ನೀನು ಅಭಿಮಾನವನ್ನು ತೊರೆದು ಮಾಡಿಕೊ........ಬಲ್ವಂತೂ, ಈಸಬೇಕು, ಇದ್ದು ಜಯಿಸಬೇಕು."

" ನಿಜ " ಎಂದಿತು ಕರುಳು. " ನಿಜ, ನಿಜ," ಎಂದು ಉಸುರಿದರು ರಾಯರು.

ಆತ್ಮಹತ್ಯೆಯ ಯೋಚನೆಯನ್ನು ಮಾಡಿದ್ದಕ್ಕೆ ಅವರಿಗೇ ನಾಚಿಕೆಯಾಯಿತು. ಅವರಿಗೆ ದೊರೆತ ವೈರಾಗ್ಯದ ನೆರಳಿನಲ್ಲಿ

ರಾಯರು ಹೊಸತೊಂದು ಭರವಸೆಯನ್ನು. ಉತ್ಸಾಹವನ್ನು ಕಂಡರು. ನೆಲದಿಂದ ಎದ್ದು ಅವರು 'ಸ್ವಿಚ್ಚ'ನ್ನು ಹಾಕಿದರು. ಸಪ್ತ ಸಮುದ್ರಗಳನ್ನು ದಾಟಿ ಹಿಂತಿರುಗಿ ಬಂದು ಹೊಸ ಹೊಸ ದೃಷ್ಟಿಯಿಂದ ಎಲ್ಲವನ್ನೂ ನೋಡುವಂತಿತ್ತು ರಾಯರ ದೃಷ್ಟಿ. "ಮಂತ್ರಿಗಳು, ಪ್ರತಿಭಾಶಾಲಿಗಳು ಈಗ್ಲೂ ತಲೆ ಎತ್ಕೊಂಡು ಓಡಾಡಲ್ವೆ" ಅವರು ಸಮಾಧಾನ ತಂದುಕೊಂಡರು. "ಊಹು ಅದಾಗದು, ನನ್ಕೈಲಾದ್ಮಟ್ಗೆ ನಾನು ಈ ವಿಚ್ಛೇದನದ ಪದ್ಧತೀನೇ ಕಿತ್ತೊಗ್ಯಕ್ಕೆ ಪ್ರಯತ್ನಿಸ್ಬೇಕು........ಆದರೆ ನಾನು ಒಬ್ಬ, ಇಡೀ ರಾಷ್ಟ್ರದ ಬಲವನ್ನೇ ಎದುರಿಸಲಾಗುತ್ಯೇ?........ ಏಕಾಗದು? ಒಂದು ಕಿಡಿ ಇರುವುದು ಅಣುಮಾತ್ರ, ಜ್ವಾಲೆ ವಿಶ್ವವ್ಯಾಪಕವಾಗಬಲ್ಲುದು....ಸಾಧ್ಯಾಸಾಧ್ಯಗಳ ವಿಷಯ ಬೇಡ....ಕರ್ತವ್ಯದೃಷ್ಟಿಯಿಂದ ನನ್ನ ಕೈಲಾದಮಟ್ಟಿಗೆ ಅದಕ್ಕಾಗಿ ದುಡಿಯುತ್ತೇನೆ." ರಾಯರು ನಿರ್ಧರಿಸಿಕೊಂಡರು. ಆಗ ಅವರಿಗೆ ನಿದ್ದೆಯ ಅರಿವಾಯಿತು. ಪಾದಗಳಲ್ಲಿ ನೋವಾಗುತ್ತಿದ್ದುದು ಅವರ ಅನುಭವಕ್ಕೆ ಬಂತು. ನೋಡುವಲ್ಲಿ ನಾಲ್ಕಾರು ಗಾಜಿನ ಚೂರುಗಳು ಸಿಕ್ಕಿಕೊಂಡಿದ್ದುವು. ರಾಯರು ಹಾಗೆಯೇ ಆರಾಮ ಕುರ್ಚಿಯ ಮೇಲೆ ಕುಳಿತುಕೊಂಡು, ಅವನ್ನು ಕಿತ್ತು ತಮ್ಮ ಪಾದಕ್ಕೆ ಮುಲಾಮನ್ನು ಹಚ್ಚಿಕೊಂಡರು. ಕೆಳಗೆ ಚೂರು ಚೂರಾಗಿ ಬಿದ್ದಿದ್ದ ಕನ್ನಡಿಯನ್ನು ನೋಡುತ್ತಲೆ ಅವರಿಗೆ ನಾಚಿಕೆಯಾಯಿತು. ಆರಾಮ ಕುರ್ಚಿಯಿಂದ ಎದ್ದು ತೂಗುಹಾಕಿದ್ದ ತಮ್ಮ ಷರಾಯನ್ನೇ ತೆಗೆದುಕೊಂಡು ಅದರಿಂದ ಆ ಗಾಜಿನ ಚೂರುಗಳನ್ನೆಲ್ಲಾ ಬಾಗಿಲಿನ ಹಿಂದಿನ ಮೂಲೆಗೆ ಗುಡಿಸಿಬಿಟ್ಟರು. ಗಡಿಯಾರದಲ್ಲಿ ಒಂದು ಘಂಟೆ ಹೊಡೆಯಿತು. ಆಗ ರಾಯರಿಗೆ ಬೆಳಗಿನಜಾವ ತಮಗಾಗಿ ಕಾದಿದ್ದ ಕಾರ್ಯಗೌರವದ ನೆನಪಾಯಿತು. ಜೇಬಿನಲ್ಲಿದ್ದ 'ಗೌರವದ ಪತ್ರ'ವನ್ನು ಹೊರತೆಗೆದು, ಅದನ್ನೇ ನೋಡುತ್ತಾ ಅವರು ಹಿಗ್ಗಿದರು.

ಕಾರ್ಯತತ್ಪರತೆಗೆ ಉದಾಹರಣೆಯಂತಿದ್ದರು ಬಲವಂತರಾಯರು. ಅಧಿಕಾರ ಕ್ಷೇತ್ರದಲ್ಲಿ ಅದೇ ಅವರ ದೀಕ್ಷೆಯಾಗಿತ್ತು. ಅವರು ಜನರಲ್ಲಿ ಸಂಪಾದಿಸಿದ್ದ ಗೌರವ, ಆದರಗಳಿಗೂ ಅದೇ ಕಾರಣ. ತಮ್ಮ ಕೆಲಸ

ವನ್ನು ನಿರ್ವಹಿಸುವುದರಲ್ಲೇ ಅವರಿಗೆ ಆನಂದ.

ಮೂರು ಘಂಟೆಗೇ ಎದ್ದು ತಮ್ಮ ಪಾಲಿಗೆ ಬಂದಿದ್ದ ಕಾರ್ಯ ವನ್ನು ಯಥಾವತ್ತಾಗಿ, ಆಮೂಲಾಗ್ರವಾಗಿ, ನಿರ್ವಹಿಸುವ ಬಗೆ ಯನ್ನು ರಾಯರು ಹಿಗ್ಗಿನಿಂದ ಲೆಕ್ಕ ಹಾಕಿಕೊಂಡರು. ನಿದ್ದೆಯನ್ನು ಬಯಸುತ್ತಿದ್ದ ಅವರ ಕಣ್ಣು ಹಾಗೆಯೇ ಗಡಿಯಾರದ ಕಡೆ ಹೊರಳಿತು. ಘಂಟೆ ಒಂದೂಕಾಲು ಆಗಿತ್ತು. " ಇನ್ನು ಒಂದೂವರೆ ಘಂಟೆಯಾದರೂ ನಿದ್ರೆ ಅವಶ್ಯಕ " ಎಂದಿತು ಅವರ ಬಾಯಿಂದ ಹೊರಹೊಮ್ಮಿದ ಆಕಳಿಕೆ. ರಾಯರು ಗಡಿಯಾರವನ್ನು ಕೈಗೆ ತೆಗೆದುಕೊಂಡು ಮೂರು ಘಂಟೆಗೆ ಸರಿಯಾಗಿ ಅದು ಮೂರು ಸಲ ಜೋರಾಗಿ ಚೀರುನಂತೆ ಅದಕ್ಕೆ ಕೀಲು ಕೊಟ್ಟು, ಅನಂತರ ' ಸ್ವಿಚ್ಚನ್ನು ' ಆರಿಸಿ, ತಮ್ಮ ಮೃದುವಾದ ಸುಪ್ಪತ್ತಿ ಗೆಯ ಮೇಲೆ ಮಲಗಿಕೊಂಡರು. ಹೊದಿಕೆಯನ್ನು ಮೇಲೆಳೆದುಕೊಂಡ ಮೇಲೂ ಅವರ ಮುಂದೆ ಬಂದ ಅನೇಕ ಯೋಚನೆಗಳನ್ನು ಸಂತೈಸಿ, ಬೀಳ್ಕೊಟ್ಟು, ಅವರು ಕಣ್ಣು ರೆಪ್ಪೆಯನ್ನು ಮುಚ್ಚುವ ವೇಳೆಗೆ ಒಂದು ಘಂಟೆ ಇಪ್ಪತ್ತು ನಿಮಿಷವಾಗಿತ್ತೆಂಬುದನ್ನು ಕತ್ತಲಾದರೂ ವಂಚನೆ ಇಲ್ಲದೆ ಕೆಲಸ ಮಾಡುತ್ತಿದ್ದ ಗಡಿಯಾರ ತೋರಿಸುತ್ತಿತ್ತು.

೧೩

ಮಾರನೆಯ ದಿನ ಹೊರಬಿದ್ದ 'ದೇಶಭ್ರಷ್ಟನಾರು ?' ಮುಂತಾದ ಪತ್ರಿಕೆಗಳ ಬೆಳಗಿನ ಮುದ್ರಣದಲ್ಲೇ 'ಪಬ್ಲಿಸಿಟಿ ಆಫೀಸರ್'ರು ಇತ್ತಿದ್ದ ಸರ್ಕಾರಿ ಪ್ರಕಟಣೆ ಮೊದಲ ಪುಟದಲ್ಲೇ ದೊಡ್ಡ ಅಕ್ಷರಗಳಲ್ಲಿ ಹೊರ ಬಿದ್ದಿತ್ತು :

**ವಿಶೇಷ ಪೋಲೀಸು ಅಧಿಕಾರಿ ಬಲವಂತರಾಯರ ನೇತೃತ್ವದಲ್ಲಿ ಬೆಳಗಿನ ಜಾವ ಐದು ಘಂಟೆಗೆ ಸರಿಯಾಗಿ ಅಪರಾಧಿಯನ್ನು ಶೂಲಕ್ಕೇರಿಸಲಾಯಿತು.**

ನಾಲ್ಕು ನಲವತ್ತಕ್ಕೆ ಸರಿಯಾಗಿ ಇಪ್ಪತ್ತೈದು ವರುಷದ ತರುಣ, ಸದಾ ನಗುಮುಖರಾದ ಬಲವಂತರಾಯರು ಅಪರಾಧಿಯನ್ನು ಕೊನೆಯ 'ಹೇಳಿಕೆ'ಯನ್ನು ಕೊಡೆಂದು, ಎಂದಿನಂತೆ ಮಂದಹಾಸ ಬೀರುತ್ತಾ ಆಜ್ಞಾಪಿಸಲಾಗಿ ಅಪರಾಧಿ ಕೆಳಗೆ ಕಂಡ ಹೇಳಿಕೆಯನ್ನು ಕೊಟ್ಟ:

**"ನನ್ನನ್ನು ಶೂಲಕ್ಕೇರಿಸಿ ನೀವುಗಳು ನಿಜವಾದ ಅಪರಾಧಿಗಳನ್ನು ಬಚ್ಚಿಟ್ಟಿದ್ದೀರಿ. ನಿಮ್ಮ ಹೃದಯಗಳನ್ನು ನೀವೇ ತಡುಕಿ ನಿಮ್ಮ ನಿಮ್ಮಲ್ಲಿರುವ ತಪ್ಪುಗಳನ್ನು ತೊಳೆದು ಕೊಳ್ಳುವಂತಾದರೆ ನನಗೆ ಶಾಂತಿ ಸಿಗುತ್ತೆಂದು ಭಾವಿಸುತ್ತೇನೆ."**

ನ್ಯಾಯ ಚಿರಾಯುವಾಗಲಿ.



